ಗಂಡುಗಲಿ

# ಕುಮಾರ ರಾಮ

ಹುಲ್ಲೂರು ಶ್ರೀನಿವಾಸ ಜೋಯಿಸ್

ರಸಿಕ ರಂಜಿನಿ ಪ್ರಕಾಶನ

ಪೋಸ್ಟ್ ಬಾಕ್ಸ್ ೩೫ :: ಅರಸೀಕೆರೆ.

# ೧

ಹದಿಮೂರನೆ ಶತಮಾನಾಂತ್ಯದಲ್ಲಿ ಕನ್ನಡ ನಾಡಿನ ಪೂರ್ವಭಾಗದಲ್ಲಿ ಮುಮ್ಮಡಿ ಸಿಂಗನೆಂಬ ನಾಯಕನು ನೂರಾರು ಕಿರಾತರನ್ನು ಆಳುತ್ತಾ ವನಾಧಿಪತಿಯಾಗಿದ್ದನು. ಮಂಚಲೆ ಅವನ ರಾಣಿ. ಕಂಪೀದೇವರೆಂಬ ಅಭಿದಾನದ ಮುರಹರನ ಮೂರ್ತಿಯನ್ನು ಭಕ್ತಿಯಿಂದ ಪೂಜಿಸುತ್ತಾ ಅವರು ಸುಖದಿಂದ ಇರುತ್ತಿದ್ದರು.

ಆದರೆ ಪುತ್ರರಿಲ್ಲವೆಂಬ ಕೊರತೆಯು ಮಾತ್ರ ರಾಣಿಯನ್ನು ಕೊರಗಿಸುತ್ತಿತ್ತು. ಸತಿಪತಿಗಳು ಪುತ್ರಾರ್ಥಿಗಳಾಗಿ ಭಕ್ತಿಯಿಂದ ಈಶನನ್ನು ಪೂಜಿಸುತ್ತಿದ್ದರು. ಈಶನು ಇವರ ಭಕ್ತಿಗೆ ಮೆಚ್ಚಿದವನಾಗಿ ಬಿಲ್ಲಿನ ಮೇಲಿನ ಪುಷ್ಪವನ್ನು ಪ್ರಸಾದವಾಗಿ ಕರುಣಿಸಿದನು. ಕಾಲಕ್ರಮದಲ್ಲಿ ಪುತ್ರನೋರ್ವನು ಜನಿಸಲು ಕಂಪಿಲನೆಂದು ಹೆಸರಿಟ್ಟು ಅವನನ್ನು ಮುದದಿಂದ ಪಾಲಿಸುತ್ತಿದ್ದರು. ಈ ಬಾಲಕನು ಪ್ರವರ್ಧಮಾನನಾಗಲು ಸೋದರತ್ತೆಯ ಮಗಳು ಕಾಟಮನನ್ನು ತಂದು ವಿವಾಹ ಮಾಡಿದರು.

ಸುಖವು ಯಾರಿಗೂ ಸ್ಥಿರವಲ್ಲ. ಸಂತೋಷದಿಂದ ಜೀವನ ಮಾಡುತ್ತಿದ್ದ ಈ ಕುಟುಂಬಕ್ಕೆ ದುಃಖಗಳು ಒಂದರ ಮೇಲೊಂದು ಬಂದುವು. ವೃದ್ಧಾಪ್ಯದಿಂದ ಮುಮ್ಮಡಿ ಸಿಂಗನು ಮಡಿದನು. ಆ ದೇಶಕ್ಕೆ ಬರಗಾಲವು ಪ್ರಾಪ್ತವಾಗಿ ಹುಣ್ಣಿನ ಮೇಲೆ ಬರೆ ಹಾಕಿದಂತಾಯಿತು. ಆದರೂ ದುಃಖಾಕ್ರಾಂತಳಾದ ಮಂಚಲೆಯು, ಧೈರ್ಯಗುಂದದೆ ತನ್ನ ಹದಿನೆಂಟು ವರುಷದ ಮಗನೊಂದಿಗೆ ಪಡುವಲ ಸೀಮೆಗೆ ವಲಸೆಗಾಗಿ ಹೊರಟಳು. ಬಂಧು ಬಳಗ

ದವರೂ, ಇತರ ನಾಲ್ಕೆಂಟು ಕಿರಾತ ಮುಖ್ಯರೂ ರಾಣಿಯೊಂದಿಗೆ ಕಂಪಳ, ಸಂಸಾರ ಸಹಿತ ಬಂದರು.

ಚಿನ್ನಹಗರಿಯ ದಡದಲ್ಲಿ ಜಟ್ಟಂಗಿ ರಾಮಗಿರಿಯ ಬಳಿ ಹಸುರಾದ ಪ್ರದೇಶವನ್ನು ನೋಡಿ ಕಂಪಳ ಸಹಿತ ಅಲ್ಲಿಯೇ ತಂಗಿದರು. ಜಟ್ಟಂಗಿ ರಾಮೇಶನ ದಯದಿಂದ ಕಂಪಿಲನಿಗೆ ಕಾಟನೆಂಬ ಮಗನು ಹುಟ್ಟಿದನು. ಅಂದಿನಿಂದ ಜಟ್ಟಂಗಿ ರಾಮೇಶನು ಅವರ ಮನೆ ದೇವರಾದನು. ಕಾಲ ಕ್ರಮದಲ್ಲಿ ಕಂಪಿಲನ ಮನೆಯು ಬೆಳೆದು ದೊಡ್ಡದಾಯಿತು. ಆದ್ದರಿಂದ ಕಂಪಳ ಎದ್ದು ಮುಂದಕ್ಕೆ ನಡೆಯಿತು. ಸ್ವಲ್ಪ ದೂರ ಸಾಗಿ ಲೋಹಗಿರಿಯಲ್ಲಿರುವ ತಾರಕಾಸುರ ಸಂಹಾರಿಯಾದ ಕುಮಾರಸ್ವಾಮಿಯನ್ನು ಕಂಡು ಅವನ ಪಾದಕ್ಕೆರಗಿ ಕಾಡುಗೆಣಸು, ಜೇನುತುಪ್ಪವನ್ನು ಹರಕೆಯೊಪ್ಪಿಸಿ ಅಲ್ಲಿಂದ ಮುಂದಕ್ಕೆ ನಡೆದು ಹೊಸಮಲೆಯ ಕಣಿವೆಯು ಬೇಟೆಯಿಂದ ಜೀವಿಸಲು ಅನುಕೂಲವಾಗಿರುವುದನ್ನು ಕಂಡು ಅರಣ್ಯ ಮಧ್ಯದಲ್ಲಿ ಹಟ್ಟಿಯನ್ನು ಕಟ್ಟಿಕೊಂಡು ವಾಸಿಸುತ್ತಿದ್ದರು.

## ೨

ದೊಡ್ಡ ದೊಡ್ಡ ಅಲೆಗಳಿಂದ ಹೊಡೆಯಲ್ಪಡುವ ತಡಿಗಳುಳ್ಳ ಸಮುದ್ರಗಳ ಮಧ್ಯದಲ್ಲಿಯೂ, ಮೇರುಗಿರಿಯ ದಕ್ಷಿಣ ಭಾಗದಲ್ಲಿಯೂ, ಸಿರಿಯಿಂದಲೂ ಶೃಂಗಾರದಿಂದಲೂ ಮತ್ತು ಸೊಬಗಿನಿಂದಲೂ ಎಸೆಯುವ ಕನ್ನಡ ನಾಡು ಇರುವುದು. ಗೋದಾವರಿಯಿಂದ ಕಾವೇರಿಯವರೆಗೆ ಅನೇಕ ಗ್ರಾಮಗಳೂ, ನಗರಗಳೂ, ದುರ್ಗಗಳೂ ಮತ್ತು ಪ್ರಾಂತಗಳಿಂದ ಈ ದೇಶವು ಮೆರೆಯುತ್ತಿರುವುದು. ಈ ನಾಡಿನ ಮಧ್ಯದಲ್ಲಿ ತುಂಗಭದ್ರಾ ತೀರದಲ್ಲಿಯೂ ಸರೋವರದ ಪಕ್ಕದಲ್ಲಿಯೂ ಇರುವ ಪ್ರಸಿದ್ಧವಾದ ಪಂಪಾ ಕ್ಷೇತ್ರದಲ್ಲಿ ವಿರೂಪಾಕ್ಷೇಶ್ವರನು ನೆಲೆಸಿರುವನು. ಈ ಪಂಪಾ ಕ್ಷೇತ್ರದ ದಕ್ಷಿಣ ದಿಕ್ಕಿನಲ್ಲಿ, ಹೊಸಮಲೆ ಎಂಬ ಘೋರಾರಣ್ಯದ ಮಗ್ಗುಲಲ್ಲಿ, ಅಮರಾವತಿಯು ಭೂಮಿಗೆ ಇಳಿದು ಬಂದಿರುವುದೋ ಎಂಬಂತೆ, ಹೊಳೆಯುತ್ತಿರುವ ಚಿನ್ನದ ಕಲಶಗಳ ಉಪ್ಪರಿಗೆಗಳಿಂದಲೂ, ರಾಜವೀಧಿಗಳಿಂದಲೂ ಮೆರೆಯುವ ಹೊಸಮಲೆ ದುರ್ಗ (ಈಗಿನ

ಹೊಸದುರ್ಗ) ವೆಂಬ ನಗರಿಯು ಪ ಕಾಶಿಸುತ್ತಿದ್ದಿತ್ತು. ಈ ನಗರಿಗೆ ಅಗಳು, ಆಳುವೇರಿಗಳು, ದಿಡ್ಡಿ ಮತ್ತು ಕೊಳಗಳಿಂದ ಆವೃತವಾದ ಕೋಟೆಯು ಕಟ್ಟಲ್ಪಟ್ಟಿದ್ದಿತು: ಪಟ್ಟಾಭಿಷಿಕ್ತ ರಾಜನಾದ ಕಂಪಿಲರಾಯನು ತನ್ನ ವಿಸ್ತಾರ ವಾದ ದೇಶಕ್ಕೆ ಈ ನಗರಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಗಜಶಾಲೆ, ಹಯಶಾಲೆ, ಆಯುಧ ಶಾಲೆ, ನಾಟಕ ಶಾಲೆ ಮತ್ತು ಚಿತ್ರಶಾಲೆ ಮುಂತಾದುವುಗಳ ಮಧ್ಯದಲ್ಲಿ ರಂಜಿಸುವ ಅರಮನೆಯಲ್ಲಿ ವಾಸಿಸುತ್ತಿದ್ದನು. ಕಂಪಿಲನು ಈ ಪ್ರಾಂತಕ್ಕೆ ಅಧಿಪತಿಯಾಗಿ ಗುತ್ತಿಯ ಜಗದಪ್ಪರಾಯನಿಗೆ ಕಪ್ಪವನ್ನು ಕೊಡುತ್ತಾ ದಿಟ್ಟ ಬೇಡನೆನಿಸಿಕೊಂಡಿದ್ದನು.

ಹೀಗಿರುವಲ್ಲಿ ಗುಜರಾತು ದೇಶದಲ್ಲಿದ್ದ ಆರೆಯ ರಾಯನೋರ್ವನು ರಾಜ್ಯಚ್ಯುತನಾಗಿ ದೇಶ ದೇಶವನ್ನು ತಿರುಗುತ್ತಾ ಕೃಷ್ಣಾನದಿಯನ್ನು ದಾಟಿ, ತೋರಗಲ್ಲು, ಬಾದಾಮಿ ನಗರಗಳನ್ನು ನೋಡಿಕೊಂಡು, ತುಂಗಭದ್ರಾ ನದಿಯನ್ನು ದಾಟಿ ಕಂಪಿಲರಾಯನಿದ್ದೆಡೆಗೆ ಬಂದು ಆತನನ್ನು ಕಂಡು ಆ ರಾಯನಿಗೆ ತನ್ನ ಕುಮಾರಿ ಹರಿಯಾಲ ದೇವಿಯನ್ನು ಕಾಣಿಕೆಯಾಗಿ ಒಪ್ಪಿಸಿ ದನು. ಚಂದ್ರ ವದನೆಯಾದ ಹರಿಯಾಲ ದೇವಿಯನ್ನು ಕಂಪಿಲರಾಯನು ಸಂತೋಷದಿಂದ ಸ್ವೀಕರಿಸಿ ವಿವಾಹ ಮಾಡಿಕೊಂಡು ತಕ್ಕ ಕನಕ ವಸ್ತ್ರಗಳ ನ್ನಿತ್ತು ಮರ್ಯಾದಿಸಿದನು.

ಸತಿ ಪತಿಯರು ಸುಖದಿಂದ ಇರುತ್ತಿರಲು ದೇವ ಜಟ್ಟಂಗಿ ರಾಮೇಶನ ವರದಿಂದ ಕೆಲವು ಕಾಲಾನಂತರ ಹರಿಯಾಲ ದೇವಿಯ ಗರ್ಭದಲ್ಲಿ ಒಬ್ಬ ಕುವರನು ಜನಿಸಿದನು. ಕಂಪಿಲ ರಾಯನು ಈ ಕುವರನಿಗೆ ರಾಮನೆಂಬ ಹೆಸರನ್ನಿಟ್ಟು ಅತಿ ಮಮತೆಯಿಂದ ಸಾಕಿದನು. ರಾಮನು ಅನೇಕ ವಿದ್ಯೆ ಗಳನ್ನೂ, ಅಂಗಸಾಧನೆಗಳನ್ನೂ ಕಲಿತು, ಗಜ, ತುರಗ ದೇರಾಟದಲ್ಲಿ ನಿಪುಣ ನಾಗಿ ಬೆಳೆಯುತ್ತಿದ್ದನು.

೨

ಇತ್ತ ನಾಲ್ಕುಂದಿ ಮುಕ್ಕುಂದಿ ಎಂಬಲ್ಲಿ ದೇವರೆಡ್ಡಿ, ಯಲ್ಲಮ್ಮ ಎಂಬ ದಂಪತಿಗಳಿಗೆ ರತ್ನಾಜಿಯೆಂಬ ಪುತ್ರಿಯಿದ್ದಳು. ಅವರು ತಮ್ಮ ಪುತ್ರಿಯನ್ನು

ಪ್ರೀತಿಯಿಂದ ಸಲಹುತ್ತಿರುವಲ್ಲಿ ಚಂದ್ರವದನೆಯಾದ ಈ ರತ್ನಾಜಿಯು ರತಿಯಂತೆ ರೂಪವತಿಯಾಗಿ ಹದಿನೆಂಟು ವರುಷದ ಕನ್ನಿಕೆಯಾಗಿ ಶೋಭಿಸಿದಳು.

ಒಂದು ದಿನ ಕಂಪಿಲರಾಯನು ಬೇಟೆಯಾಡಿ ಬರುತ್ತಿದ್ದಾಗ ಅಲ್ಲಿ ಚಪಲಾಕ್ಷಿಯಾದ ರತ್ನಾಜಿಯನ್ನು ಕಂಡು ಅಂಗಜನ ಬಾಣದಿಂದ ಸೊರಗಿ ವಿರಹಾಗ್ನಿಯಿಂದ ತ್ರಾಣ ಗುಂದಿದನು. ಕೂಡಲೇ ಕಂಪಿಲನು ತನ್ನ ಮನೋಗತವನ್ನು ಆ ಬಾಲಕಿಯ ತಂದೆ ತಾಯಿಗಳಿಗೆ ಅರುಹುವಂತೆ ಚಾರರನ್ನು ಅಟ್ಟಿದನು. ರತ್ನಾಜಿಯ ತಂದೆ ತಾಯರು ಕೀಳು ಕುಲದವನಿಗೆ ತನ್ನ ಮಗಳನ್ನು ಕೊಡುವುದಿಲ್ಲವೆಂದು ಚಾರರಿಗೆ ತಿಳಿಸಿಬಿಟ್ಟರು. ಇದನ್ನು ಕೇಳಿದ ರಾಯನು ಕೋಪದಿಂದ ಅವರ ಮನೆಯ ಬಳಿಗೇ ಹೋದನು. ಭಯಭ್ರಾಂತರಾದ ತಂದೆ ತಾಯಿಗಳು ರತ್ನಾಜಿಯ ಅಭಿಪ್ರಾಯವನ್ನು ಕೇಳಿದರು. ರತ್ನಾಜಿಯು ವಿವಾಹವಾಗುವುದಾಗಿ ತನ್ನ ಮನಬಿಚ್ಚಿ ನುಡಿದಳು. ಸಂತೋಷಗೊಂಡ ಕಂಪಿಲರಾಯನು ಆ ಕನ್ನೆಯನ್ನು ಸ್ವೀಕರಿಸಿ, ಅವಳ ತಂದೆ ತಾಯಿಗಳಿಗೆ ಎರಡು ಗ್ರಾಮಗಳನ್ನು ಉಮ್ಮಳಿಯಾಗಿ ಕೊಟ್ಟು ತನ್ನ ಸತಿಯೊಡನೆ ಹೊನ್ನಂದಣವನ್ನೇರಿ ಅರಮನೆಯನ್ನು ಸೇರಿದನು.

ಹರಿಯಾಲ ದೇವಿಯು ಚಾರರಿಂದ ಈ ಸಂಗತಿಯನ್ನು ತಿಳಿದವಳಾಗಿ ತನ್ನ ಕಂದ ರಾಮಯ್ಯನಿಗೆ ತಿಳಿಸಿ ತರುಣಿಯಾದ ಇವಳಿಂದ ತನ್ನ ಮುದ್ದು ಕುಮಾರನಿಗೆ ಏನು ಅಪಾಯ ಒದಗಬಹುದೋ ಎಂದು ದುಗುಡ ಹೊಂದಿದಳು. ರಾಮನು ತಾಯಿಯ ಇಂಗಿತವನ್ನು ತಿಳಿದು ಪರ ಸತಿಯ ಮೋಹಕ್ಕೆ ತಾನೆಂದಿಗೂ ಒಳಗಾಗುವುದಿಲ್ಲವೆಂದು ತಾಯ ಬಳಿ ಶಪಥ ಮಾಡಿದನು.

ಈ ನುಡಿಯನ್ನು ತಾನಿದ್ದಲ್ಲಿಯೇ ಕೇಳಿ ತಿಳಿದ ರತ್ನಾಜಿಯು ರಾಮಯ್ಯನ ಈ ನಿಯಮವನ್ನು ಕೆಡಿಸುವೆನೆಂದು ಮನಸ್ಸಿನಲ್ಲಿ ನಿರ್ಧರಿಸಿಕೊಂಡಳು; ಆದರೆ ಕಾಲವು ಇನ್ನೂ ಒದಗಿಲ್ಲವೆಂದರಿತು, ಮಾಗಿಯ ಕೋಗಿಲೆಯಂತೆ ತನ್ನ ಅಭಿಪ್ರಾಯವನ್ನು ಹೊರಗೆಡಹದೆ ಮನದಲ್ಲಿಯೇ ಅಡಗಿಸಿಕೊಂಡಳು! ಸುಸಮಯವು ಒದಗಿಬರಲೆಂದು ಕಾಯ ತೊಡಗಿದಳು.

೪

ಕುಮಾರ ರಾಮಯ್ಯನು ಕೋಮಲೆಯರ ಕಣ್ಣ ಬೇಟೆಗೆ ಸಿಲುಕದಂಥಾ ನೇಮವನ್ನು ಮಾಡಿಕೊಂಡು ಮೇಘವಾಹನಾಚಾರಿ ಎಂಬ ಅಕ್ಕಸಾಲೆ

ಯಿಂದ ನವರತ್ನ ಖಚಿತವಾದ ಬಿರುದಿನ ಬಳೆಯನ್ನು ಮಾಡಿಸಿ, "ಪರದಾರ ಸೋದರ ರಾಮ"ನೆಂಬ ಅಂಕಿತವನ್ನು ಬರೆಯಿಸಿ ತನ್ನ ಎಡದ ಕಾಲೊಳಗೆ ಧರಿಸಿದನು.

ಒಂದು ದಿನ ಕುಮಾರ ರಾಮನು ಗರಡಿಗೆ ಹೋಗಿ ವಿಧವಿಧವಾದ ಸಾಧನೆಯನ್ನು ಮಾಡಿಕೊಂಡು ಅರಮನೆಗೆ ಬಂದು ತನ್ನ ಮಾವನೊಡನೆ ಉದಯ ಕಾಲದ ಊಟವನ್ನು ಮುಗಿಸಿಕೊಂಡು, ಚದುರಂಗವಾಡಿ, ಕುದುರೆ ಯನ್ನೇರಿ ಬೇಟೆಗೆ ಹೊರಟನು. ಇವನೊಡನೆ ಕಾಟಣ್ಣನೂ, ಇತರ ಮೊನೆ ಗಾರರೂ ಹೊರಟರು. ಹಂಪೆಯ ಹೊಳೆಯನ್ನು ದಾಟಿ ಅವರು ದುರ್ಗಕ್ಕೆ ಬಂದರು.

ಅವರೆಲ್ಲರಿಗೂ ರಾಮಯ್ಯನ ಹೆಸರಿನಲ್ಲಿ ಒಂದು ದುರ್ಗವನ್ನು ಕಟ್ಟ ಬೇಕೆಂದು ಅಪೇಕ್ಷೆಯಿದ್ದಿತು. ಅವರಿಗೆ ಈ ದುರ್ಗವು ಒಳ್ಳೆಯ ಸ್ಥಳವಾಗಿ ಕಂಡದ್ದರಿಂದ ಆ ದುರ್ಗಕ್ಕೆ ರಾಮನದುರ್ಗವೆಂದು ಹೆಸರಿಟ್ಟು ಸುತ್ತಲಿನ ವನದಲ್ಲಿ ಸ್ವೇಚ್ಛೆಯಾಗಿ ಬೇಟೆಯಾಡಿ ಹೊಸಮಲೆಗೆ ಹಿಂತಿರುಗಿದರು. ತಂದೆಯ ಬಳಿಗೆ ಬಂದು ರಾಮಯ್ಯನೂ ಮತ್ತು ಅವನ ಸಹೋದರರೆಲ್ಲರೂ ಆತನ ಚರಣಕ್ಕೆ ವಂದಿಸಿದರು.

ದೊರೆಗಳ ಗರ್ಭದಲ್ಲಿ ಜನಿಸಿದ ಬಳಿಕ ಧುರದಲ್ಲಿ ಅಂಜದಿರಬೇಕು, ಮರೆ ಹೊಕ್ಕವರ ಮರಳಿ ಕೊಡದಿರಬೇಕು, ಅರಿಗಳನ್ನು ಹೊಕ್ಕಿರಿಯಬೇಕು, ಕಾಯದಾಸೆಯ ಬಿಡಬೇಕು, ರಣಾಗ್ರದಲ್ಲಿ ಕಡಿದಾಡಿ ಸಾಯಬೇಕು- ಇಂಥವರಿಗೆ ಮುಕ್ತಿಯುಂಟು. ಇವೆಲ್ಲವನ್ನು ರಾಮಯ್ಯನು ಅರಿತಿದ್ದನು ಒಂದು ದಿನ ಸುತ್ತಲಿರುವ ರಾಜರಿಗೆ ಕಪ್ಪಕಾಣಿಕೆ ಕೊಡುವುದನ್ನು ನಿಲ್ಲಿಸಿ, ಕುಮ್ಮಟದುರ್ಗವನ್ನು ವಿಸ್ತರಿಸಿ, ಕೋಟೆ, ಕೊತ್ತಳ, ಕಟ್ಟಿಸಿ, ಅಲ್ಲಿ ಮಂದಿ ಮಾರ್ಬಲವನ್ನು ಇಡಲು ನಮಗೆ ಅನುಜ್ಞೆಯನ್ನು ಕೊಡಿ ಎಂದು ಕಂದ ರಾಮಯ್ಯನು ಹೇಳಿದ ಮಾತನ್ನು ತಂದೆಯು ಕೇಳಿ ಹಿರಿದಾಗಿ ಹಿಗ್ಗಿದನು.

ಕಂದನಿಗೆ ಅತಿ ಪ್ರೀತಿ ಎನಿಸಿದ್ದ ಕುಮ್ಮಟದುರ್ಗದ ಕೋಟೆಯನ್ನು ಆ ತಂದೆಯು ಕಟ್ಟಲು ಆಣತಿ ಮಾಡಿದನು. ಕೋಟೆ, ಕೊತ್ತಳ, ಅಗಳು, ತೋಟ, ವನ, ಕೆರೆ, ಬಾವಿಗಳು ಕೂಡಲೇ ನಿರ್ಮಿತವಾದವು. ರಾಜವೀಥಿ ಗಳೂ, ಪೇಟೆ ಸಾಲುಗಳು, ಉಪ್ಪರಿಗೆಯ ಮನೆಗಳೂ, ಅಂಗಡಿ ಬೀದಿಯೂ, ರಂಗಮಂಟಪಗಳೂ, ಶೃಂಗಾರ ಮತ್ತು ವಿಟರ ಕೇರಿಗಳೂ, ಸಂಗ್ರಾಮಧೀರ

ನಾದ ರಾಮಯ್ಯನಿಗೆ ಹೊಂಗೆಲಸದ ಅರಮನೆಯೂ, ರಚಿತವಾದುವು. ದೊಡ್ಡ ಅರಮನೆಯೂ, ಅಕ್ಕಪಕ್ಕಗಳಲ್ಲಿ ಚಿಕ್ಕ ಅರಮನೆಗಳೂ, ಸಾಲು ಬೀದಿಗಳೂ, ಊರು ಬಾಗಿಲು, ದಿಡ್ಡಿಯ ಬಾಗಿಲುಗಳೂ, ಉತ್ತಮ ಶಿಲ್ಪಿಗಳಿಂದ ರಚಿಸಲ್ಪಟ್ಟವು. ರಂಗ ಮಂಟಪಗಳೂ, ರಮಣೀಯ ಕೇರಿಗಳೂ, ಶೃಂಗಾರ ವನಗಳೂ, ಕೇಳೀ ಗೃಹಗಳೂ, ರತ್ನಾಜಿಯ ಅರಮನೆಯೂ, ಆ ಕುಮ್ಮಟ ದುರ್ಗಕ್ಕೆ ಒಪ್ಪವಾಗಿದ್ದವು. ಈ ಪುರದಲ್ಲಿ ಕಾಟಣ್ಣನರಮನೆಯೂ, ನಾಟಕ ಶಾಲೆಯೂ, ದೊಡ್ಡ ಕುದುರೆಯ ಲಾಯವೂ, ಆಟಪಾಟಗಳನ್ನು ನೋಡುವ ಚಾವಡಿಯೂ ಇದ್ದು ನೋಟಕರಿಗೆ ಆನಂದವನ್ನುಂಟು ಮಾಡುತ್ತಿದ್ದವು.

ಜ್ಞಾನಿ ರಾಮಯ್ಯನಿಗಾಗಿ ನೂತನವಾದ ಅರಮನೆಯನ್ನು ಕಟ್ಟಿಸಿ, ಆನೆಯ ಸಾಲು, ಕುದುರೆಯ ಸಾಲುಗಳನ್ನು ಏರ್ಪಡಿಸಿ ಬೊಕ್ಕಸದ ಮನೆ ಮಹಾ ನವಮಿಯ ಉತ್ಸವದ ಮಂಟಪವನ್ನೂ ನಿರ್ಮಿಸಿ ಯಾವ ನ್ಯೂನತೆಯೂ ಇಲ್ಲದಂತೆ ಮಾಡಿದರು. ಮಂತ್ರಿ ಬೈಚಪ್ಪನಿಗಾಗಿ ಒಂದು ಭವ್ಯವಾದ ಅರಮನೆಯೂ ಮಾನ್ಯೆಯರ ಕೇರಿಗಳೂ, ಕಂತುಕೇಳಿಯರ ಮನೆಗಳೂ, ಐಯ್ಯದಾಯಿಗಳ ಬಜಾರ ಇವುಗಳ ಶೃಂಗಾರವು ವರ್ಣನಾತೀತ ವಾಗಿತ್ತು. ಬ್ರಾಹ್ಮಣ ಕೇರಿಗಳೂ, ಹರದರ ಕೇರಿಗಳೂ, ಆರೇರ ರಾಮಯ್ಯ ನಿಗಾಗಿ ಒಂದು ವಿಶಾಲವಾದ ಮನೆಯೂ, ರಾಮನ ಸಹೋದರಿಯರಾದ ಮಾರಮ್ಮ, ಸಿಂಗಮ್ಮ ಇವರ ಅರಮನೆಗಳೂ, ಅಗಸರಕೇರಿ, ಮಾಂಸ ಮಾರು ವರ ಕೇರಿ, ಶಿಶುಗಳಿಗೆ ಪಾಲ್ಬೆಣ್ಣೆಗಳ ಕೊಡುವ ಗೃಹಗಳೂ, ಅನ್ನಸತ್ರಗಳೂ, ಕುಮ್ಮಟದುರ್ಗದಲ್ಲಿ ಕುಶಲತೆಯಿಂದ ಕಟ್ಟಲ್ಪಟ್ಟವು. ಈ ದುರ್ಗಕ್ಕೆ ಕುರಿ ಕೋಣಗಳನ್ನು ಬಲಿ ಕೊಡಿಸಿದನು. ಬ್ರಾಹ್ಮಣರಿಗೆ ಸಂತರ್ಪಣೆ ಮಾಡಿಸಿ, ಉಳಿದ ಸಮಸ್ತರಿಗೂ ಅನ್ನ ಶಾಂತಿಯನ್ನು ಮಾಡಿಸಿ ತೃಪ್ತಿಪಡಿಸಿದರು. ಈ ರೀತಿಯಿಂದ ಮಲ್ಲೇಶನ ಗುಡಿಯ ಮುಂದೆ ಕುಮ್ಮಟ ದುರ್ಗವು ನಿರ್ಮಿತ ವಾಗಿ ಉಮಾಪತಿಯ ಕೃಪೆಯಿಂದ ಜನಭರಿತವಾಗಿ ರಂಜಿಸಿತು.

ಕುಮಾರ ರಾಮನು ಬಹಳ ಅದೃಷ್ಟಶಾಲಿ; ಹೊಸಮಲೆಯ ಸಮಸ್ತ ಪ್ರಜೆಗಳೂ ಕುಮ್ಮಟದುರ್ಗಕ್ಕೆ ಬಂದು ನೆಲಸಿದರು. ಬಾಜಿ ಮಲ್ಲನನ್ನು ನಾನಾ ದೇಶಗಳಿಗೆ ಕಳುಹಿಸಿ ಅಲ್ಲಿದ್ದ ಧೀರ ಬೇಡರನ್ನು ಕರೆಸಿಕೊಂಡು ಅವರ ವಾಸಕ್ಕಾಗಿ ಬೇಡರ ಕೇರಿಗಳನ್ನು ಕುಮ್ಮಟದಲ್ಲಿ ಸ್ಥಾಪಿಸಿದನು. ಬೂಟಾಕ ಬೊಮ್ಮ, ಮುದುಗೊಂಡಲೋಬ, ಬೇಟೆಯ ಸಿಂಗ ಮೊದಲಾದ ಬೇಡರ

ವೀರರ ಪಡೆಗಳನ್ನು ನೇಮಕ ಮಾಡಿದನು. ಇಂತಹ ಪಡೆಗಳು ಇಪ್ಪತ್ತು ಇದ್ದುವು. ಇವರಲ್ಲದೆ ಆರೇರ ಮಕ್ಕಳ ನಾಯಕತ್ವದಲ್ಲಿ ೬೦೦ ಕುದುರೆಯ ರಾವುತರನ್ನೂ ತನ್ನ ಲಾಯದ ೨೦೦ ರಾವುತರನ್ನೂ ನೇಮಿಸಿದನು. ಕುಮಾರ ರಾಮನು ಹೀಗೆ ಅಪಾರವಾದ ಸೇನೆಯನ್ನು ನೇಮಿಸಿ ಕುಮ್ಮಟ ದುರ್ಗವನ್ನು ಶ್ರೇಷ್ಠವಾದ ನಗರವೆಂದು ಪರಿಗಣಿಸುವಂತೆ ಮಾಡಿ ಧೀರನಾದ ಕಂಪಿಲರಾಯನಿಗೆ ಸಂತೋಷವನ್ನುಂಟುಮಾಡಿದನು.

ಅನಂತರ ಕುಮಾರ ರಾಮನು ತನ್ನ ಅಣ್ಣ ಕಾಟಣ್ಣನೊಂದಿಗೆ ಸೈನ್ಯ ಸಮೇತನಾಗಿ ದಿಗ್ವಿಜಯಕ್ಕೆ ಹೊರಟು, ಸುತ್ತಲಿನ ರಾಜ್ಯಗಳನ್ನು ಒತ್ತರಿಸುತ್ತಾ ಹಾನಗಲ್ಲು ಸೀಮೆಯನ್ನು ಕಟ್ಟಿದನು. ನೀಲನೆಂಬ ಕುದುರೆಯನ್ನೇರಿ ಮೋನಾದಿ, ಬಾದಾಮಿ ಮೊದಲಾದ ನಗರವನ್ನು ಸ್ವಾಧೀನಪಡಿಸಿಕೊಂಡು ಕರಿಯ ಹೊಳೆ (ಕೃಷ್ಣಾನದಿ)ಯನ್ನು ದಾಟಿ ರಾಜ್ಯವನ್ನು ಗೆಲ್ಲುತ್ತಾ ತನ್ನ ಪುರವನ್ನು ಸೇರಿದನು. ಸಂತೋಷಭರಿತನಾದ ಕಂಪಿಲರಾಯನು ಕುಮಾರ ರಾಮನ ಶೌರ್ಯಕ್ಕೆ ಮೆಚ್ಚಿ ಉಡುಗೊರೆಯನ್ನು ಕೊಟ್ಟು ಮನ್ನಿಸಿದನು.

ಇಲ್ಲಿ ನಡೆದ ರಾಜ ಕಾರ್ಯವನ್ನು ದೋರಸಮುದ್ರದಲ್ಲಿ ಆಳುತ್ತಿದ್ದ ದೊರೆ ಬಲ್ಲಾಳರಾಯನ ಆಶ್ರಿತರಾದ ಪಾಳೆಯಗಾರರು ತಮ್ಮ ಅಧಿಪತಿಗೆ ತಿಳಿಸಿದರು. ಗುತ್ತಿಯ ಜಗದಪ್ಪ ಅರಸನಿಗೆ ಅವನ ಆಶ್ರಿತರು ಕುಮಾರ ರಾಮನು ಮಾಡಿದ ದಾಂಧಲೆಯನ್ನು ಅರುಹಿದರು. ಬಲ್ಲಾಳ ಭೂಪನೂ, ಜಗದಪ್ಪ ಅರಸನೂ ಕುಪಿತರಾಗಿ ಕಂಪಿಲನ ಔದ್ಧತ್ಯವನ್ನು ಹೋಗಲಾಡಿಸಿ ಅವನಿಂದ ಕಪ್ಪವನ್ನು ತೆರಿಸುವುದಾಗಿ ಶಪಥ ಮಾಡಿದರು. ಈ ಸಂಗತಿಯು ದೆಹಲಿಯ ಬಾದಷಹನಿಗೂ ವರದಿಯಾಯಿತು.

೫

ಆಗ್ಗೆ ದೆಹಲಿ ನಗರದಲ್ಲಿ ಆಳುತ್ತಿದ್ದ ಸುಲ್ತಾನನಾದ ಮಹಮದ್‌ಬಿನ್ ತೊಗಲಖ್‌ನಿಗೆ ಸರ್ವಾಂಗ ಸುಂದರಿಯೂ, ವಿವಾಹ ಯೋಗ್ಯಳೂ ಆದ ಬಾಬಮ್ಮನೆಂಬ ಕುವರಿ ಇದ್ದಳು. ಇವಳಿಗೆ ಯೋಗ್ಯನಾದ ವರನನ್ನು ಆರಿಸುವುದಕ್ಕಾಗಿ ಚಲುವ ಚನ್ನಿಗರಾದ ವಜೀರರನ್ನೂ ಖಾನಖಾನರನ್ನೂ

ಸಭೆಗೆ ಕರೆಸಿ ತನ್ನ ಕುವರಿಗೆ ತೋರಿಸಿದನು. ಅಷ್ಟು ಜನ ಸುಂದರರಲ್ಲಿ ಬಾಬಮ್ಮನು ಯಾರನ್ನೂ ಒಪ್ಪಲಿಲ್ಲ. ಆದ್ದರಿಂದ ಯೋಚನಾಪರನಾದ ಸುಲ್ತಾನನು ತನ್ನ ಆಪ್ತ ಸಚಿವನಾದ ನೇಮಿ ಖಾನನನ್ನು ಕರೆಸಿ ಆಲೋಚಿಸಿದನು. ಈ ನೇಮಿಯಿಂದ ನಿಯಮಿತರಾದ ಕಾಶೀ ನಗರದ ಬ್ರಾಹ್ಮಣರು ಭರತ ಖಂಡವನ್ನೆಲ್ಲಾ ಸುತ್ತಿಕೊಂಡು ಹೋಗಿ ಅಲ್ಲಿಂದ ೩೯೪ ಗಾವುದ ದೂರವಲ್ಲಿರುವ ಕುಮ್ಮಟದಲ್ಲಿರುವ ಚೆನ್ನಿಗ ರಾಮನೆಂಬುವನು ಬಾಬಮ್ಮನಿಗೆ ತಕ್ಕ ವರನೆಂದು ನಿರೂಪಿಸಿ ಅವನನ್ನು ವರ್ಣಿಸಿದರು. ರಾಮನು ನಳಕೂಬರ, ನಳಿನ ನಾಭ, ಮನ್ಮಥರಂತೆ ರೂಪವಂತನೆಂದೂ, ಕತ್ತಿಯ ವಿದ್ಯೆಯಲ್ಲಿ ಈ ಭೂಮಂಡಲದಲ್ಲಿಯೇ ಇವನಿಗೆ ಸಮಾನರಾದವರು ಯಾರೂ ಇಲ್ಲವೆಂದೂ ಅವನ ರೂಪಕ್ಕೆ ಎಂತಹ ಸುಂದರಿಯರೂ ಮನಸೋಲುವರೆಂದು ವಿವರಿಸಿದರು. ಸುಲ್ತಾನನು ಬ್ರಾಹ್ಮಣರಿಗೆ ಉಡುಗೊರೆಗಳನ್ನು ಕೊಟ್ಟು ಕಳುಹಿಸಿದನು.

ಆದರೆ, ರಾಮನು ಜಗದೊಡೆಯನ ಕುವರಿಗೆ ಅನುರೂಪನಾದವರನಲ್ಲೆಂದು ಸುರತ್ರಾಣನು ಪರಿಹಾಸ ಮಾಡಿದನು. ಬಾಬಮ್ಮ,

"ರಾಮನಲ್ಲದೆ ಮತ್ತೊಬ್ಬರನ್ನು ವರಿಸುವುದಿಲ್ಲ. ಇತರ ಪುರುಷರು ನನ್ನ ತಂದೆಗೆ ಸಮಾನರು" ಎಂದು ನುಡಿದುಬಿಟ್ಟಳು. ತನ್ನ ಕುಮಾರಿಯ ಮಾತಿಗೆ ಬೆರಗಾಗಿ ಸುಲ್ತಾನನು ಮಗಳ ಇಚ್ಛೆಯನ್ನು ಪೂರ್ತಿಮಾಡಲು ಮುಂದಿನ ಉಪಾಯವೇನೆಂದು ಚಿಂತೆ ಮಾಡುತ್ತಿರಲು ಮುಖ್ಯ ಮಂತ್ರಿಯಾದ ನೇಮೀ ಖಾನನು ರಾಮನನ್ನು ಆಸ್ಥಾನಕ್ಕೆ ಕರೆಸುವುದಾಗಿ ಸುಲ್ತಾನನಿಗೆ ಹೇಳಿದನು.

ನೇಮಿಯ ಮುಖ್ಯರಾದ ಖಾನರನ್ನೂ ಪ್ರಧಾನರನ್ನೂ ಕರೆಸಿದನು. ಒಂದು ಪಲ್ಲಕ್ಕಿಯನ್ನು ತರಿಸಿ ಅದರಲ್ಲಿ ನವರತ್ನ ಖಚಿತವಾದ ಹಾವುಗೆಗಳನ್ನಿಟ್ಟು ಅದರ ಜೊತೆಯಲ್ಲಿ ಒಂದು ಜೊತೆ ಜೋಡನ್ನಿಡಿಸಿದನು. ಅವನ್ನು ನಿತ್ಯವೂ ಪೂಜಿಸುವಂತೆ ಒಬ್ಬ ಯುವತಿಯನ್ನು ನೇಮಕ ಮಾಡಿ, ಪಲ್ಲಕ್ಕಿಯೊಂದಿಗೆ ಎಲ್ಲಾ ದೇಶಕ್ಕೂ ಪ್ರಯಾಣ ಮಾಡಬೇಕೆಂದು ತನ್ನ ಸೈನಿಕರಿಗೆ ಅಪ್ಪಣೆ ಮಾಡಿದನು.

"ಕೊಂಕಣ ಮೊದಲಾದ ದೇಶಗಳನ್ನು ಸುತ್ತಿಕೊಂಡು ಕರ್ಣಾಟಕಕ್ಕೆ ಹೋಗಿ. ಅಲ್ಲಿ ಸಣ್ಣ ಸಣ್ಣ ಪಾಳೆಯಗಾರರಿದ್ದಾರೆ. ಅವರಿಗೆಲ್ಲಾ ಮುಖ್ಯನಾದವನು ಜಗದಪ್ಪನು. ಈ ನಗರವನ್ನು ಲಗ್ಗೆ ಮಾಡಿ ಸಿಕ್ಕಿದ ಕೊಳ್ಳೆಯನ್ನು ಡಿಲ್ಲಿಗೆ ಕೂಡಲೇ ಕಳುಹಿಸಿರಿ. ಅನಂತರ ಕುಮ್ಮಟ

ದುರ್ಗಕ್ಕೆ ಹೋಗಿ ಹೊನ್ನು ಕೊಡುವಂತೆ ಕೇಳಿರಿ. ತಂಟೆ ಮಾಡದೆ ಕೊಟ್ಟರೆ ನೀವು ಸುಮ್ಮನೆ ತೆಗೆದುಕೊಂಡು ಬನ್ನಿರಿ" ಎಂದು ಅವರಿಗೆ ಪುನಃ ಆಣತಿ ಮಾಡಿ ಓಲೆಯನ್ನು ಬರೆಸಿ ಕಳುಹಿಸಿದನು. ಖಾನಖಾನರು ನೇಮಿಯ ಆಜ್ಞೆಯನ್ನು ಪಡೆದು ಹೊರಟು ದೇಶ ದೇಶಗಳನ್ನು ಸುತ್ತಿ ಕಪ್ಪವನ್ನು ತೆಗೆದು ಕೊಳ್ಳುತ್ತಾ ಮುಂದಕ್ಕೆ ನಡೆದು ಗುತ್ತಿಯ ಜಗದಪ್ಪನ ಬಳಿಗೆ ಬಂದರು.

ಜಗದಪ್ಪನು ಬಂದು ಖಾನರನ್ನು ಆದರಿಸಿ ಬಿಡಾರದಲ್ಲಿ ಅವರನ್ನು ಇಳಿಸಿ ಹಾವುಗೆಗಳಿಗೆ ಅಡ್ಡಬಿದ್ದು, ಓಲೆಯನ್ನು ಓದಿಸಿದನು. ಅನಂತರ ಕಪ್ಪ ವನ್ನೊಪ್ಪಿಸಿದನು. ಕೂಡಲೇ ಖಾನರು ಎಲ್ಲವನ್ನು ದೆಹಲಿಗೆ ಕಳುಹಿಸಿದರು.

ಖಾನ ಖಾನರು ಜಗದಪ್ಪನ ಐದು ಸಾವಿರ ಕುದುರೆ ಸವಾರರೊಡನೆ ಕುಮ್ಮಟ ದುರ್ಗಕ್ಕೆ ಪ್ರಯಾಣ ಮಾಡಿದರು. ಮೊದಲೇ ಬಂದಿದ್ದ ಚಾರ ರಿಂದ ಕಂಪಿಲರಾಯನು ಎಲ್ಲಾ ವಿಷಯಗಳನ್ನು ತಿಳಿದವನಾಗಿ, ದೆಹಲಿಯ ಕಡೆಯವರನ್ನು ವಿಚಾರಿಸಲು ಬೈಚಪ್ಪನನ್ನು ಕಳುಹಿಸಿದನು. ಮಂತ್ರಿಯು ಅವರನ್ನು ಆದರದಿಂದ ಬರಮಾಡಿಕೊಂಡು ಬಿಡಾರ ಮಾಡಿ ಇಳಿಸಿ, ಅವರ ಆಗಮನದ ಸಂಗತಿಯನ್ನೆಲ್ಲಾ ಅರಿತುಕೊಂಡು ಹೋಗಿ ಕಂಪಿಲರಾಯನಿಗೂ ರಾಮಯ್ಯನಿಗೂ ತಿಳಿಸಿದನು.

"ಹಾವುಗೆಗಳಿಗೆ ಕಾಣಿಕೆಯನ್ನಿಟ್ಟು ವಂದಿಸಬೇಕು; ಶುದ್ಧ ಮನಸ್ಸಿ ನಿಂದ ಒಂದು ಬಳ್ಳ ಹೊನ್ನನ್ನು ಅಳೆದು, ಕಪ್ಪವನ್ನು ಕೊಡಬೇಕು,"ಎಂಬ ಮಾತನ್ನು ಕೇಳಿ ಕಂಪಿಲರಾಯನು ಕಂದಿಹೋದನು.

ಬಳ್ಳ ಹೊನ್ನನ್ನು ಕೊಡುವಷ್ಟು ಭಾಗ್ಯವು ನಮಗಿಲ್ಲ. ಸುಲ್ತಾನನ ಸಂಗಡ ಕಾದುವ ಶಕ್ತಿಯೂ ನಮಗಿಲ್ಲ. ಮುಂದೇನು ಮಾಡಬೇಕು?" ಎಂದು ಮಂತ್ರಿಯನ್ನು ಕೇಳಿದನು. ಆದರೆ ತಕ್ಷಣ ಅಲ್ಲಿಯೇ ಕುಳಿತಿದ್ದ ರಾಮುನೆದ್ದು ನುಡಿದನು,

"ನಾಳೆ ನಾವೆಲ್ಲರೂ ಖಾನಖಾನರ ಬಳಿಗೆ ಹೋಗಿ ಪ್ರಾಪ್ತವಾಗಿರುವ ಸಂಕಟವನ್ನು ಪರಿಹರಿಸಿಕೊಳ್ಳೋಣ."

ಮರುದಿವಸ ತಂದೆ ಮಕ್ಕಳು ಬೈಚಪ್ಪನೊಡನೆ ಖಾನರ ಬಿಡಾರಕ್ಕೆ ಹೋಗಿ ಮುಖ್ಯ ಸರದಾರನ ಭೇಟಿ ಮಾಡಿದರು. ಖಾನರು ಬಂದ ರಾಮಯ್ಯ ನನ್ನು ನೋಡಿ ಬೆರಗಾಗಿ ಬಾಬಮ್ಮನಿಗೆ ಈತ ತಕ್ಕ ವರನೆಂದು ಮನದಲ್ಲಿಯೇ ಹರ್ಷಿಸಿದರು.

"ನಾವು ದೆಹಲಿಯ ಸುಲ್ತಾನನಿಂದ ಆಜ್ಞಪ್ತರಾಗಿ ನಿಮ್ಮ

ಬಳಿಗೆ ವೀಳೆಯವನ್ನು ತಂದಿದ್ದೇವೆ. ನೀವು ಸಣ್ಣ ಸಣ್ಣ ಹಳ್ಳಿಗಳನ್ನು ಗೆದ್ದು ಪಾಳೆಯವನ್ನು ಕಟ್ಟಿರುವಿರಾದ್ದರಿಂದ ಬಳ್ಳ ಹೊನ್ನನ್ನು ಕಪ್ಪವಾಗಿ ಕೊಡಬೇಕು," ಎಂದು ಮುಖ್ಯ ಸರದಾರನು ತಿಳಿಸಿದನು.

"ಆದರೆ ನಾವು ಬಡವರು. ನಮ್ಮ ಅಡವಿಯ ರಾಜ್ಯಕ್ಕೆ ತಕ್ಕಂತಹ ಕಪ್ಪವನ್ನು ಕೊಡಲು ಸಿದ್ಧವಾಗಿರುವೆವು. ಅದನ್ನು ತೆಗೆದುಕೊಂಡು ಮುಂದಕ್ಕೆ ದಯಮಾಡಿಸಿರಿ," ಖಾನರಿಗೆ ಕಂಪಿಲನು ಅರಿಕೆ ಮಾಡಿದನು.

"ಬಳ್ಳ ಹೊನ್ನನ್ನು ಕೊಡಲು ಸಾಧ್ಯವಿಲ್ಲದಿದ್ದರೆ ಕುಮಾರರಾಮನನ್ನು ನಮ್ಮೊಡನೆ ಕಳುಹಿಸಿಕೊಡಿ. ನಾವು ಆತನನ್ನು ಮಹಾಪ್ರಭುವಾದ ಸುಲ್ತಾನನಿಗೆ ಕಾಣಿಸಿದ ನಂತರ ಸಂತೋಷದಿಂದ ನಿಮ್ಮ ಮಗನನ್ನು ನಿಮ್ಮಲ್ಲಿಗೇ ಕಳುಹಿಸುವೆನು," ಎಂದು ಸರದಾರನು ಉತ್ತರ ವಿತ್ತನು.

"ಮಗನನ್ನು ಕಾಣಿಕೆಗೆ ಬದಲಾಗಿ ಕೊಡುವುದುಚಿತವೇ? ಈ ಮಾತು ಸೊಗಸುವುದಿಲ್ಲ; ನೀವು ಜಗಳಕ್ಕಾಗಿ ಬಂದಿರುವಂತೆ ಕಾಣುತ್ತದೆ. ಕುಮಾರ ರಾಮನನ್ನು ಎಂದಿಗೂ ಕೊಡುವುದಿಲ್ಲ. ಎಷ್ಟು ಕಷ್ಟವಾದರೂ ಬಳ್ಳ ಹೊನ್ನನ್ನೇ ಕೊಡುವೆನು," ಎಂದು ಕಂಪಿಲನು ತಕ್ಷಣ ನುಡಿದನು. ಅದುವರೆಗೂ ಮೌನವಾಗಿದ್ದ ರಾಮನು ನಗುತ್ತಾ,

"ಪಲ್ಲಕ್ಕಿಯಲ್ಲಿರುವ ಹಾವುಗೆಯನ್ನು ಹೊರಕ್ಕೆ ತೆಗೆಯಿರಿ; ಅದನ್ನು ನಾವು ನೋಡಬೇಕು.ಅದಕ್ಕೆ ವಂದಿಸಿ, ಹೊನ್ನನ್ನು ಕಾಣಿಕೆಯಾಗಿ ಕೊಡುವೆವು," ಎಂದು ನುಡಿದನು. ಖಾನರು ಈ ಮಾತನ್ನು ಕೇಳಿ ಪಲ್ಲಂಗವನ್ನು ತೆಗೆದರು. ನವರತ್ನ ಖಚಿತವಾದ ಆ ಹಾವುಗೆಗಳನ್ನು ನೋಡಿ, ನಿಂತಿದವರೆಲ್ಲರೂ ಆಶ್ಚರ್ಯ ಚಕಿತರಾದರು. ರಾಮನು ಮಾತ್ರ ಒಂದು ಕ್ಷಣ ಮಾಗಿಯ ಕೋಗಿಲೆಯಂತೆ ಮೌನವನ್ನು ತಾಳಿದನು. ಅನಂತರ ಅವನು ಆ ಪಾಪಾಸುಗಳ ಮೇಲೆ ಕಾಲಿಟ್ಟು ತನ್ನ ಪಾದಗಳಿಗವನ್ನು ಧರಿಸಿ,

"ಇವು ನನಗೆ ಚೆನ್ನಾಗಿ ಒಪ್ಪುತ್ತವೆ. ನಮ್ಮ ಅಣ್ಣನಿಗೆ ಸರಿಯಾದ ಇನ್ನೊಂದು ಜೊತೆ ಹಾವುಗೆಗಳನ್ನು ನಿಮ್ಮ ಊಳಿಗದವರಿಂದ ತರಿಸಿಕೊಟ್ಟರೆ ನೀವು ಕೋರಿದಷ್ಟು ಹೊನ್ನನ್ನು ಕೊಡುವೆನು," ಎಂದು ಹೇಳಿದನು. ಈ ಮಾತನ್ನು ಖಾನರು ಕೇಳಿ ಕೆಲವರು ಮೂಗಿನ ಮೇಲೆ ಬೆರಳಿಟ್ಟುಕೊಂಡರು. ಇನ್ನು ಕೆಲವರು ಮುಂಗೈಯನ್ನು ಕಚ್ಚಿಕೊಂಡು ರೇಗಿ ಬೊಬ್ಬೆಯಿಡುತ್ತಾ,

"ನಿಮ್ಮ ಕುಮ್ಮಟ ದುರ್ಗವು ಹಾಳಾಗಿಹೋಯಿತು. ನಿಮ್ಮ ಮೃತ್ಯು

ಕಾಲವು ಸಮೀಪಿಸಿತು. ಇಂತಹ ಬುದ್ಧಿಯು ನಿನಗೆ ಬರಬಾರದಾಗಿತ್ತು. ಸುಲ್ತಾನನೊಡನೆ ನಿಮಗೆ ಪಂಥವೇ? ಸುಲ್ತಾನನು ಈ ಸುದ್ದಿಯನ್ನು ಕೇಳಿದೊಡನೆಯೇ ಸವಾ ಲಕ್ಷ ಕುದುರೆಯ ದಂಡನ್ನೇ ಕಳುಹಿಸುವನು. ನಿಮ್ಮ ದುರ್ಗವು ನೆಲಸಮವಾಗುವುದು. ನಿನ್ನ ತಂದೆ ತಾಯಿಯನ್ನು ಸೆರೆಹಿಡಿಯುವರು. ನಿನ್ನ ಎಡದಕೈಯನ್ನು ಕಟ್ಟಿ ನಿನ್ನನ್ನು ಸೆರೆಯಾಗಿ ದೆಹಲಿಗೆ ತೆಗೆದುಕೊಂಡು ಹೋಗುವರು. ಈ ದುರ್ಬುದ್ಧಿಯು ನಿನಗೆ ಬೇಡ. ಈಗಲಾದರೂ ಹಾವುಗೆಗಳನ್ನು ನಮಗೆ ಒಪ್ಪಿಸಿ ಕಾಣಿಕೆಯನ್ನು ಒಪ್ಪಿಸು," ಎಂದರು.

"ಈ ಬೆದರಿಕೆಗೆ ನಾನು ಅಂಜುವವನಲ್ಲ; ನಂಜುಗೊರಳನೇ ಇದಕ್ಕೆ ಸಾಕ್ಷಿ," ಎಂದು ರಾಮನು ತಾತ್ಸಾರದಿಂದಲೇ ಹೇಳಿದನು.

ಸುಲ್ತಾನನ ಕಡೆಯಿಂದ ಬಂದವರು ತಮ್ಮ ಸಂಗಡ ಬಂದಿದ್ದ ಗುತ್ತಿಯವರೊಡನೆ ಗುತ್ತಿಯ ಜಗದಪ್ಪನ ಬಳಿಗೆ ಹೋಗಿ ಈ ಸುದ್ದಿಯನ್ನು ತಿಳಿಸಿದರು. ಮಾರನೆಯ ದಿನವೇ ಅಲ್ಲಿಂದಲೂ ಪ್ರಯಾಣ ಬೆಳಸಿ ಆರು ಏಳು ತಿಂಗಳು ದಾರಿಯನ್ನು ಸವೆಸಿ ದೆಹಲಿಯನ್ನು ಸೇರಿ ಕಂಪಿಲರಾಯನ ನಗರದಲ್ಲಿ ನಡೆದ ವೃತ್ತಾಂತವನ್ನೆಲ್ಲಾ ವಿನಯದಿಂದ ಸುಲ್ತಾನರಿಗೆ ಹೀಗೆ ತಿಳಿಸಿದರು,

"ರಾಮನು ಕಾದುವುದರಲ್ಲಿ ಬಲು ಗಟ್ಟಿಗನು, ಚೆಲುವನು; ಎಳೆಯ ಪ್ರಾಯದವನು, ಉಮಾಪತಿಯ ವರಪ್ರಸಾದದಿಂದ ಜನಿಸಿದವನು; ನಾವು ಎಂಟು ದಿಕ್ಕನ್ನೂ ನೋಡಿಕೊಂಡು ಬಂದಿದ್ದೇವೆ; ಇಂತಹ ಮನ್ಮಥ ರೂಪನನ್ನು ನೋಡಲಿಲ್ಲ. ಅವನು ರೂಪಿಗೆ ತಕ್ಕಂತಹ ಸದ್ಗುಣಿಯಾಗಿರುವನು; ಕುಮಾರ ರಾಮನು ನಮ್ಮನ್ನು ಮರ್ಯಾದೆಯಿಂದ ಬರಮಾಡಿಕೊಂಡು ಬಿಡದಿ ಮನೆಯಲ್ಲಿರಿಸಿ ನಾವಿದ್ದ ಬಳಿಗೆ ಸಂತೋಷದಿಂದ ಉಲುಪೆ, ಉಡುಗೊರೆ, ಹೊನ್ನುಗಳನ್ನು ಹೊರಸಿ ಕಳುಹಿಸಿದನು.

"ಮಾರನೆಯ ಬೆಳಿಗ್ಗೆ ತಂದೆ ಮಕ್ಕಳು ನಮ್ಮ ಬಳಿಗೆ ಬಂದು ಅಲ್ಲಿ ಇಳುಹಿಸಿದ್ದ ಪಲ್ಲಕ್ಕಿಯನ್ನು ತೆಗೆಸಿ ಅದರೊಳಗಿದ್ದ ಹಾವುಗೆಗಳನ್ನು ಮೆಟ್ಟಿ ತಾನು ವೈರಿಯ ಗಂಡನೆಂದು ಹೊಗಳಿಸಿಕೊಂಡು ತನ್ನ ಶೌರ್ಯವನ್ನು ಸುಲ್ತಾನರಿಗೆ ಅರಿಕೆ ಮಾಡಿ ಎಂದು ನಮಗೆ ಹೇಳಿದನು. ಕರ್ಣಾಟಕದಲ್ಲಿರುವ ಆ ರಾಮನು ಕತ್ತಿಯ ಏಟಿಗೆ ಅಳುಕುವವನಲ್ಲ."

ಸುಲ್ತಾನನು ಕೋಪಗೊಂಡು ನೇಮಿಯನ್ನು ಕರೆಸಿ, ಕೂಡಲೆ

ದಂಡನ್ನು ತೆಗೆದು ಕೊಂಡು ಹೋಗಿ ರಾಮನನ್ನು ಹಿಡಿದು ತರಬೇಕೆಂದು ಅಪ್ಪಣೆ ಮಾಡಿದನು. ತಂದೆಯ ಸಿಟ್ಟನ್ನು ನೋಡಿ, ಮಗಳು ತಂದೆಯ ಪಾದಕ್ಕೆ ಎರಗಿ ತಾನು ಮನಸ್ಸಿನಿಂದ ಆಗಲೇ ವರಿಸಿರುವ ಆತನನ್ನು ಉಳಿಸಿ ತನ್ನ ಐದೆತನವನ್ನುಳಿಸಬೇಂದು ಪ್ರಾರ್ಥಿಸಿದಳು. ಮಗಳ ಮಾತಿಗೆ ನಕ್ಕು ಸುಲ್ತಾನನು ಮಗಳೊಂದಿಗೆ ಅಂತಃಪುರಕ್ಕೆ ಹೊರಟು ಹೋದನು.

ಇತ್ತ ರಾಮನು ಮಾಡಿದ ಕಾರ್ಯಕ್ಕಾಗಿ ಕಂಪಿಲನು ಚಿಂತಿಸುತ್ತಿದ್ದನು. ರಾಮನನ್ನು ಶಿಕ್ಷಿಸಲು ದೊಡ್ಡ ದಂಡು ಬಂದರೆ ತಮ್ಮನ್ನು ಕಾಯಲು ಜಟ್ಟಂಗಿ ರಾಮೇಶನು ಹೊಣೆಯಾಗಿರುವನು ಎಂದು ಮಂತ್ರಿಯು ಹೇಳಿದನು. ಕಂಪಿಲರಾಯನೂ ಸುಮ್ಮನಾದನು.

ಸುಲ್ತಾನನು ಕಳುಹಿದ ಚಿನ್ನದ ಹಾವುಗೆಗಳನ್ನು ರಾಮನು ಮೆಟ್ಟಿದನೆಂಬ ಸುದ್ದಿಯು ನಾನಾ ದಿಕ್ಕುಗಳಲ್ಲಿ ಹಬ್ಬಿತು.

ಹರಿಯಾಲ ದೇವಿಯು ಮಂತ್ರಿಯನ್ನು ಕರೆಸಿ ರಾಮನು ಮಾಡಿದ ಕಾರ್ಯವನ್ನು ಕೇಳಿ ತುಂಬಾ ಚಿಂತಿಸಿದಳು. ಸುಲ್ತಾನನು ಏಳು ಕೋಟಿ ಪ್ರಜೆಗಳನ್ನಾಳುವನಾದರೂ ಕುಮಾರ ರಾಮನು ದೈವಾಂಶ ಪುರುಷನೆಂದೂ ಮಲ್ಲೇಶನ ದಯವು ಅವನಿಗಿರುವುದರಿಂದ ಯಾವ ಸೈನ್ಯಕ್ಕೂ ಹೆದರಬೇಕಾಗಿಲ್ಲವೆಂದೂ, ಮಂತ್ರಿಯು ಹೇಳಿದ ಮಾತಿಗೆ ಹರಿಯಮ್ಮನು ಸುಮ್ಮನಾದಳು.

## ೬

ಕಂಪಿಲರಾಯನು ಒಂದು ದಿನ ಕುಮ್ಮಟ ದುರ್ಗದ ಬೀದಿಯಲ್ಲಿ ತನ್ನ ಐವರು ಮಕ್ಕಳೊಂದಿಗೆ ಹೋಗುತ್ತಿದ್ದಾಗ ಗುತ್ತಿಯ ಜಗದಪ್ಪ ನಾಯಕನ ಪ್ರಧಾನರು ಬಂದು ರಾಯನನ್ನು ತಡೆದು ನಿಲ್ಲಿಸಿ ಒಂಭತ್ತುಲಕ್ಷ ಹೊನ್ನ ಕಪ್ಪವನ್ನು ಕೊಡಬೇಕೆಂದು ಕೇಳಿದರು. ಅದೇ ಮಾರ್ಗದಲ್ಲಿ ಬರುತ್ತಿದ್ದ ಕುಮಾರ ರಾಮನು ತಂದೆಯ ಬಳಿಗೆ ಬಂದು ಅವನನ್ನು ತಡೆದಿರುವ ಸಂಗತಿಯನ್ನರಿತು ತಾನು ಅಲ್ಲಿಯೇ ನಿಂತು ತನ್ನ ತಂದೆಯನ್ನು ಅರಮನೆಗೆ ಕಳುಹಿಸಿದನು. ಅನಂತರ ಗುತ್ತಿಯ ಪ್ರಧಾನರನ್ನು ಯಾವ ಹಣವನ್ನೂ ಕೊಡದೆ ಅವರನ್ನು ತನ್ನವರಿಂದ, ಅಲ್ಲಿಂದ ಓಡಿಸಿದನು.

ಅವಮಾನಿತರಾದ ಪ್ರಧಾನರು ಹಿಂತಿರುಗಿ ಗುತ್ತಿಗೆ ಹೋಗಿ ಜಗದಪ್ಪ ರಾಯನಿಗೆ ವಿಷಯುವನ್ನು ತಿಳಿಸಿದರು. ಕೋಪಗೊಂಡ ಜಗದಪ್ಪರಾಯನು ಸುತ್ತಲಿನ ರಾಯರುಗಳಿಗೆ ಸೈನ್ಯಸಮೇತರಾಗಿ ಬರಬೇಕೆಂದು ಕಾಗದಗಳನ್ನು ಬರೆಸಿ ಒಟ್ಟು ಒಂದು ಲಕ್ಷ ದಂಡಾಳುಗಳನ್ನು ಕರಸಿಕೊಂಡು ಕುಮ್ಮಟ ದುರ್ಗಕ್ಕೆ ಧಾಳಿಯಿಟ್ಟನು. ದಾರಿಯಲ್ಲಿ ಸಿಕ್ಕಿದ ಕಂಪಿಲರಾಯನ ಪ್ರಜೆಗಳ ಶಿರಗಳನ್ನು ಕತ್ತರಿಸಿ ಮುಂದುವರೆದರು. ಇತ್ತ ರಾಮನಿಗೆ ಈ ಸುದ್ದಿಯು ಮುಟ್ಟಿದ ಕೂಡಲೇ ಅವನು ತನ್ನ ಸಹೋದರರೊಡನೆ ಸೈನ್ಯ ಸಮೇತನಾಗಿ ಹೊರಟು ಶತ್ರುಗಳನ್ನು ಎದುರಿಸಿದನು. ಭಾರಿ ಹೆಗ್ಗಾಳೆಗಳು ಮೊಳಗಿದವು; ಚಿನ್ನಗಹಳೆಗಳು ಚೀರಿದವು. ಗುತ್ತಿಯನ್ನಾಳುವ ಜಗದಪ್ಪರಾಯರ ಗಂಡ, ಸುತ್ತಣರಾಯರ ಮಿಂಡ ಎಂದು ಭಟರು ರಾಮನನ್ನು ಹೊಗಳುತ್ತಿದ್ದರು. ರಾಮನ ಕಡೆಯವನಾದ ಕನ್ನೋಜಿ ನಾಯಕನು ಶತ್ರುಗಳ ಶಿರವನ್ನು ಹಾರಿಸಿದನು. ಮಾಚನೂ, ಬೂಟಲ ಬೊಮ್ಮನೂ ಮತ್ತು ಚಿನ್ನಮಾದನೂ ಎದುರು ಪಕ್ಷದ ಸಾವಿರ ಫೌಜನ್ನು ಹೊಕ್ಕಿರಿದರು. ಬುಕ್ಕನೂ, ಪಾಲನೂ, ಮುದಿಗೊಂಡಲ ಮೂಗನೂ ಅರಿ ಬಲವನ್ನು ಹೊಕ್ಕು ಮುನ್ನೂರು ಈಟಿಯಿಂದ ಕುಕ್ಕಿರಿದರು. ನಂತರ ರಾವುತ ಮಲ್ಲಣ್ಣನು ಚಿನ್ನದ ತಮ್ಮಟೆಯನು ಹೊಡೆಯಿಸುತ್ತ ಮುಂದೆ ಬಂದನು.

ಹೀಗೆ ಶತ್ರುಗಳನ್ನು ಎದುರಿಸಿದ ರಾಮನ ಮುಂದೆ ಐವತ್ತು ರಾಜ್ಯದವರೂ ಕೈ ಸೋತವರಾದರು. ರಾಮನ ಕಡೆಯವರು ಅರಿಬಲದ ಮೇಲೆ ಸೋನೆಯ ಮಳೆಯಂತೆ ಅಂಬಿನ ಮಳೆಯನ್ನು ಸುರಿಸಿದರು. ಮೀನಿಗಲಕ್ಕನು ಆನೆಯ ಹಿಂಡನ್ನು ಹೊಕ್ಕಿರಿದು ಆನೆಗಳನ್ನು ಸೆರೆಹಿಡಿದನು. ಕಾಮಗೇತಿಯ ತಿಮ್ಮನು ಆನೆಗಳ ಹಿಂಡಿನ ಮೇಲೆ ಎರಗಿ ಬಾನ ಗುರಿಗಳಂತೆ ಅವನ್ನು ಹಿಡಿದು ತಂದು ರಾಮಯ್ಯನಿಗೆ ಒಪ್ಪಿಸಿದನು. ಬೆಟ್ಟದ ಶಿಂಗನೂ, ಪಾಪನೂ ಮುನ್ನೂರು ಬಿಲ್ಲಿನವರೊಡನೆ ದಿಟ್ಟ ರಾಮಯ್ಯನ ಎಡಬಲದಲ್ಲಿ ಕಾದುತ್ತಾ ಶತ್ರುಬಲದ ಮೇಲೆ ನುಗ್ಗಿದರು. ಇನ್ನೊಂದು ಕಡೆಯಲ್ಲಿ ಕಾಟಣ್ಣನೂ, ಚಾರ ರಾಮರಾಯನ ಮಕ್ಕಳೂ, ಧೀರ ಮಾನ್ಯೆಯರಿಂದ ಕೂಡಿ ಮಾಳವ, ಮಗಧ, ಪಾಂಚಾಲ ನಾಯಕರನ್ನು ಹೊಡೆದು ಕೆಡವಿದರು

ಈ ರೀತಿಯಲ್ಲಿ ಉಭಯ ಬಲದ ಮಧ್ಯೆ ಸಿಕ್ಕಿದ ಗುತ್ತಿಯರ ಬಲವು ಬೇಡರ ಪಡೆಯನ್ನು ಇದಿರಿಸಲಾರದೆ ಅಂಜಿ ಓಡಿದರು. ಮುಂಗಡೆಯಿಂದ

ಕಾಟಣ್ಣನ ಕಡೆಯವರು ಬಂದು ರಾಮಯ್ಯನ ದಂಡನ್ನು ಸೇರಿದರು. ಈ ರೀತಿಯಲ್ಲಿ ಜಯವನ್ನು ಹೊಂದಿದ ಸಹೋದರರು ಧರ್ಮ ಕಹಳೆಯನ್ನು ಹಿಡಿಸಿ ತಮ್ಮರಮನೆಗೆ ಹಿಂತಿರುಗಿದರು. ರಾಮಯ್ಯನು ತಂದೆ ತಾಯಿಗಳ ಪಾದಕ್ಕೆ ಭಕ್ತಿಯಿಂದ ನಮಸ್ಕರಿಸಿದನು. ಕಂಪಿಲರಾಯನು ಮಗನನ್ನು ಎತ್ತಿ ಮುತ್ತಿನ ತುರಾಯಿಯನ್ನು ಕೊಟ್ಟನು. ತಾಯಿ ಹರಿಯಲಾ ದೇವಿಯು ಹೆಮ್ಮಕ್ಕಳೊಡನೆ ಸೇರಿ ಆರತಿಯನ್ನು ಎತ್ತಿದಳು. ಆ ದಿನ ಹರುಷದಿಂದ ತಂದೆ ಮಕ್ಕಳು ಸಕ್ಕರೆ, ಬಿಸಿ ಹಾಲು, ತುಪ್ಪ, ಕಡಬು, ಕಜ್ಜಾಯ ಮತ್ತು ಮೃಷ್ಟಾನ್ನ ಭೋಜನ ಮಾಡಿಕೊಂಡು ಚಿಕ್ಕ ಅರಮನೆಗೆ ಹೋದರು.

ಮರುದಿನ ಕಂಪಿಲರಾಯನು ಉದಯಕಾಲಕ್ಕೆ ಎದ್ದು, ದೇವರ ಪೂಜೆಯನ್ನು ಮಾಡಿ, ಊಟಮಾಡಿಕೊಂಡು ಸಭಾಸ್ಥಾನಕ್ಕೆ ಬಂದು ಮಂಡಿಸಿದನು. ರಾಮಯ್ಯನನ್ನು ಕರಸಿ ಹಿಂದಿನ ದಿನ ರಣರಂಗದಲ್ಲಿ ನಡೆದ ಕದನವನ್ನು ಪ್ರೀತಿಯಿಂದ ವಿಚಾರಿಸಿ ತಿಳಿದುಕೊಂಡು, ಕದನದಲ್ಲಿ ಕಾದಾಡಿದ ಮಾನ್ಯೆಯರನೂ ಪಟುಭಟರನ್ನೂ ಕರೆಯಿಸಿ ರಣದಲ್ಲಿ ತೋರಿಸಿದ ಶೌರ್ಯಕ್ಕೆ ಅವರವರ ಯೋಗ್ಯತೆಗೆ ತಕ್ಕಂತೆ ಮನ್ನಣೆಯನ್ನು ಮಾಡುವಂತೆ ರಾಮಯ್ಯನಿಗೆ ಹೇಳಿದನು. ತಂದೆಯ ಅಪ್ಪಣೆಯಂತೆ ರಾಮಯ್ಯನು ಬೊಕ್ಕಸದಿಂದ ಹಣ ಹೊನ್ನುಗಳನ್ನೂ ಹೇರಳವಾಗಿ ಪಟ್ಟೆ ಪೀತಾಂಬರಗಳನ್ನೂ, ವಸ್ತ್ರಗಳನ್ನೂ ತರಿಸಿದನು. ಧೀರ ಮಾನ್ಯೆಯರೂ, ರಾಜಪುತ್ರರೂ, ರಾವುತರ ಕುಮಾರರೂ, ರಣರಂಗವನ್ನು ಹೊಕ್ಕು ಹೆಣಗಿದ ಭಟರೂ ಮುಂತಾದವರನ್ನೆಲ್ಲಾ ರಾಮಯ್ಯನು ಕರಸಿ ಬಣವೆಗೆ ಬಿಟ್ಟ ಬಸವರಂತೆ ಊಟಮಾಡಲು ಹೇಳಿ ಅವರಿಗೆ ಮೃಷ್ಟಾನ್ನ ಭೋಜನ ಮಾಡಿಸಿದನು. ಕಾಲ ಗಗ್ಗರ, ತೋಳ ಭಾಪುರಿ, ಮಾಲೆ ಸರಗಳೂ, ಕಾಲು ಸರ, ಹೊನ್ನಿನ ಗಂಟೆಗಳು, ಹುಲಿಯ ಚರ್ಮಗಳು, ಚೌರಿಗಳು, ಮುತ್ತಿನ ತೋಳ ಭಾಪುರಿಗಳು, ಊರು ಉಮ್ಮಳಿಗಳು, ಬಿರುದಿನ ಬಳೆಗಳು, ಹಾರುವ ಉಡಾಸಗಳು, ರಂಜಕದ ಕೋವಿಗಳು, ಹೆಸರಾದ ಬಿರುದುಗಳು, ಹಗಲು ದೀವಟಿಗೆ, ಝಲ್ಲಗಳು, ಮುತ್ತಿನ ಒಂಟೆಗಳು, ಆಯುಧಗಳು ಆನೆ ಕುದುರೆಗಳು, ಗದ್ದೆ, ಹೊಲ, ಮನೆಗಳು ತೊಡಕು ಭಾಪುರಿ ಮುಂತಾದುವುಗಳನ್ನು ರಾಮಯ್ಯನು ಅವರಿಗೆ ಸಂತೋಷದಿಂದ ಕೊಟ್ಟು ಮನ್ನಿಸಿದನು.

ಬಡತನವನ್ನು ನೋಡಿ ಹಣ ಹೊನ್ನುಗಳನ್ನೂ, ಘಾಯಗೊಂಡವರಿಗೆ ಬಾಯಿ ತುಂಬ ಹೊನ್ನು, ಉಡುಗೊರೆ, ಹಿಡಿ ಹೊನ್ನು ಮೊದಲಾದವನ್ನೂ,

ರಣದಲ್ಲಿ ಮಡಿದವರ ಮಕ್ಕಳನ್ನು ಕರೆಸಿ ಅವರವರ ತಂದೆಯರ ಮರ್ಯಾದೆ ಯಂತೆ ಮುತ್ತು ಭಂಗಾರವನ್ನು ಕೊಟ್ಟನು. ಈ ರೀತಿಯಲ್ಲಿ ಮಂದಿ ಮಕ್ಕಳನ್ನು ಸಮಾಧಾನಮಾಡಿ ಉಡುಗೊರೆ ಗಂಧ ವೀಳೆಯವನ್ನು ಕೊಟ್ಟು ಕಳುಹಿಸಿದನು. ಅನಂತರ ತಂದೆಗೆ ನಮಸ್ಕಾರಮಾಡಿ ತನ್ನ ಅರಮನೆಗೆ ಹೊರಟು ಹೋದನು.

## ೭

ಒಂದು ದಿವಸ ಕಂಪಿಲರಾಯನು ಉದಯ ಕಾಲದಲ್ಲಿಯೇ ಬೈಚಪ್ಪ ನೊಡನೆ ಮಂತ್ರಾಲೋಚನೆಯನ್ನು ಮಾಡುತ್ತಿದ್ದನು. ದೆಹಲಿಯ ಸುಲ್ತಾನನ ಖಾನರೂ ನಜೀರರೂ ನಮ್ಮ ನಗರಿಗೆ ಬಂದು ತಂಟೆಯನ್ನು ಮಾಡಿ ಹಿಂದಿರುಗಿರುವರು. ಇದರಿಂದ ಮುಂದೆ ಕಾಳಗವು ಒದಗುವುದು ಸಿದ್ಧವು. ಸುಲ್ತಾನನ ಮನಸ್ಸು ಯಾವ ರೀತಿಯೆಂಬುದನ್ನು ತಿಳಿದು ಬರಲು ದೆಹಲಿಗೆ ಕಳ್ಳ ಭಂಟರನ್ನು ಕಳುಹಿಸುವುದು. ಎಂದು ಅವರು ಮಾತನಾಡುತ್ತಿರುವಾಗ ಬಾಗಿಲು ಕಾಯುತ್ತಿದ್ದ ಗೊಲ್ಲರು ಓಡಿ ಬಂದು ಅಡ್ಡಬಿದ್ದು ಜಗದಪ್ಪರಾಯನ ಕಡೆಯವರು ಬಂದಿರುವುದಾಗಿಯೂ, ರಾಜಕುಮಾರಿ ರಾಮಕ್ಕನನ್ನು ಕುಮಾರ ರಾಮನಿಗೆ ಕೊಟ್ಟು ವಿವಾಹ ಮಾಡಬೇಕೆಂಬ ಸುದ್ದಿಯನ್ನು ತಂದಿರುವುದಾಗಿಯೂ ಅರಿಕೆ ಮಾಡಿದರು. ಜಗದಪ್ಪರಾಯನ ಕಡೆಯಿಂದ ಬಂದವರನ್ನು ಆಸ್ಥಾನಕ್ಕೆ ಬರಮಾಡಿಕೊಂಡು ಕಂಪಿಲರಾಯನು ಸಂತೋಷದಿಂದ ವಿವಾಹಕ್ಕೆ ತನ್ನ ಸಮ್ಮತಿಯನ್ನು ಹೇಳಿದನು.

ಚಾರರು ಇಲ್ಲಿ ಗೌರವಗೊಂಡು ತಮ್ಮ ಊರನ್ನು ಸೇರಿ ಜಗದಪ್ಪನಿಗೆ ವಂದಿಸಿ ಉಭಯ ರಾಯರ ಅಂತರಂಗವು ಹೊಂದಿಕೆಯಾದ ಸಂಗತಿಯನ್ನು ಅರುಹಿದರು. ಜಗದಪ್ಪನು ಸಕ್ಕರೆಯನ್ನು ಸವಿದಂಥಾ ಸುದ್ದಿಯನ್ನು ಕೇಳಿ ಹರ್ಷಿಸಿದನು. ಕುಮಾರಿ ರಾಮಲಾದೇವಿಯನ್ನು ಕರೆಸಿ ವಿವಾಹದ ಸುದ್ದಿಯನ್ನು ತಿಳಿಸಿದನು. ಮಗಳಿಗೆ ಮುತ್ತು ಭಂಗಾರವನ್ನು ಬಗೆಬಗೆ ಆಭರಣಗಳನ್ನು ಐದೂರು ಉಮ್ಮಳಿಯನ್ನು ಕೊಟ್ಟನು. ಮೈದೊಡಿಗೆ ವಸ್ತ್ರಗಳನ್ನಿತ್ತನು. ಅಳಿಯನಿಗಾಗಿ ಸುಲಕ್ಷಣದ ಐದು ಕುದುರೆಗಳನ್ನು, ಮಗಳಿಗೆ ಹಾಲು

ಕರೆಯುವ ಎಪ್ಪತ್ತೈ ಹಿಂಡುಗಳನ್ನು ಕಳುಹಿಸಿದನು. ಮಗಳೊಡನೆ ಮಂತ್ರಿ ತಿಮ್ಮರಸನೂ, ನಿಬ್ಬಣದವರೂ, ಸೋಭಾನು ಪಾಡುವ ಮೃಗನೇತ್ರೆಯರೂ, ಅರ್ಥಿಯಿಂದ ಹೊರಟರು. ನಾಲ್ವತ್ತು ಊಳಿಗದ ಮಂದಿಯರೂ, ಕಳಸ ಕನ್ನಡಿ ಚೌರಿಗಳನ್ನು ಹಿಡಿದವರೂ, ಮಂತ್ರಿಮಾನ್ನೆಯರೂ, ಅರಸುಮಕ್ಕಳೂ ಸಂಗಡಲೇ ಹೊರಟರು. ರಾಜಕುಮಾರ ಉತ್ತುಂಗನನ್ನು ಶೃಂಗರಿಸಿ ಅವನ ಕೈಕೆಳಗೆ ಸಾವಿರ ಕುದುರೆಯ ಫೌಜನ್ನು ಕೊಟ್ಟು ಕಳುಹಿಸಿದನು. ಕುಮಾರಿಯು ತಂದೆತಾಯಿಗಳ ಪಾದಗಳಿಗೆ ವಂದಿಸಿದಳು. ಈ ಮದುವೆಯ ನಿಬ್ಬಣವು ಮಂಗಳ ಗೀತಗಳನ್ನು ಹಾಡುತ್ತಾ ನಡೆಯುತ್ತಿರಲು ಜಗದಪ್ಪರಾಯನು ಒಂದು ಗಾವುದ ದೂರ ಇವರೊಡನೆ ಬಂದು ಮದುಮಗಳಿಗೆ ಆಶೀರ್ವದಿಸಿ ಹಿಂದಿರುಗಿದನು.

ಉತ್ತುಂಗರಾಯನಿಂದ ಮುಂದಾಗಿ ಕಳುಹಿಸಲ್ಪಟ್ಟ ಚರರು ಓಡಿ ಬಂದ ಸುದ್ದಿಯನ್ನು ಅರುಹಿದರು. ಕಂಪಿಲರಾಯನು ಬೀಗರನ್ನು ದಾರಿಯ ಮಧ್ಯದಲ್ಲಿಯೇ ಎದುರುಗೊಂಡು ಕರೆದುಕೊಂಡು ಬರಲು ಕಾಟಣ್ಣನನ್ನು ನೇಮಕ ಮಾಡಿ ಕಳುಹಿಸಿದನು. ಕಾಟಣ್ಣನು ಹೊರ ಚಾವಡಿಗೆ ಬಂದು ಮಂದಿ ಮಾನ್ಯೆಯರನ್ನೂ, ಅರಸು ಮಕ್ಕಳನ್ನೂ ಕೂಡಿಕೊಂಡು, ಹಂಪರಾಜ, ಕಂಪರಾಜ, ಸಂಗಮದೇವ ಇವರುಗಳನ್ನು ಕರೆದುಕೊಂಡು ಹೊರಟನು. ತಾನೂ ಅರಸು ಮಕ್ಕಳೂ ಆನೆಯನ್ನೇರಿ ಹರದಾರಿ ಹೋಗಿ ಉತ್ತುಂಗರಾಯನನ್ನು ಒಂದಾನೆಯ ಮೇಲೆ ಕೂಡಿಸಿ ನಗರಾಭಿಮುಖನಾಗಿ ಕರೆದುಕೊಂಡು ಬಂದನು. ಸತ್ತಿಗೆಗಳು ಸಾಲಿಟ್ಟು ಬರುತ್ತಿರುವಾಗ ಉತ್ತುಂಗರಾಯನು ಮುತ್ತಿನ ಸತ್ತಿಗೆಯ ಬಳಿ ಆನೆಯನ್ನೇರಿ ಬರುವ ಸಂಭ್ರಮವನ್ನು ಜನರು ನೋಡಿ ಹರ್ಷಿಸಿದರು. ನಗಾರಿ, ಚಿನ್ನಗಹಳೆ, ಮೊದಲಾದ ವಾದ್ಯಗಳು ಮೊರೆಯುತ್ತಿದ್ದವು. ಕುದುರೆಗಳು ಸಾಲಿಟ್ಟು ಬರುವಾಗ ಮಾನ್ಯೆಯರೂ ಮಂದಿಯೂ ಎಡಬಲದಲ್ಲಿ ನಿಂತು ನೋಡುತ್ತಿದ್ದರು. ಪಲ್ಲಕ್ಕಿಗಳ ಮಧ್ಯದಲ್ಲಿ ಮುತ್ತಿನ ಪಲ್ಲಕ್ಕಿಯಲ್ಲಿ ಕುಳಿತುಕೊಂಡು ರಾಮಲಾದೇವಿಯು ಬರುತ್ತಿರುವ ಉಲ್ಲಾಸವನ್ನು ಕಂಡು ಜನರು ಆನಂದಪರವಶವಾಗಿದ್ದರು.

ಕಾಟಣ್ಣನು ಬೀಗರನ್ನು ಕರೆದುಕೊಂಡು ಬಂದು ಕುಮಾರ ರಾಮನ ಅರಮನೆಯ ಮುಂದಿನ ಶೃಂಗಾರವನದಲ್ಲಿ ಬಿಡಾರವನ್ನು ಇಳಿಸಿ ರತ್ನಖಚಿತವಾದ ಉಚಿತಾಸನಗಳನ್ನಿಡಿಸಿ ಕೂಡಿಸಿದನು.

ಬೀಗರು ಬಂದು ಬಿಡಾರಮಾಡಿದ ವರ್ತಮಾನವನ್ನು ಕಂಪಿಲರಾಯನು ಕೇಳಿ, ಅರಸು ಮಕ್ಕಳುಗಳೊಡನೆ ಉತ್ತುಂಗರಾಯನ ಬಳಿಗೆ ಬಂದನು. ಕೂಡಲೇ ಉತ್ತುಂಗರಾಯನು ಎದ್ದು ವಂದಿಸಿದ ನಂತರ ಉಭಯರ ಕುಶಲ ಪ್ರಶ್ನೆಗಳು ನಡೆದವು. ಗಂಧ ಪುಷ್ಪ ತಾಂಬೂಲಾದಿಗಳು ವಿನಿಯೋಗವಾದ ನಂತರ ಬಿಡದಿ ಮನೆಗೆ ಹೋಗಿ ಇಳಿದರು. ಬಿಡದಿ ಮನೆಯ ಬಾಗಿಲಿಗೆ ಎರಡು ಕುರಿಗಳ ಮಂಗಳ ನಿವಾಳಿಯನ್ನು ತೆಗೆದರು. ಉತ್ತುಂಗರಾಯನು ಬಂದವರಿಗೆಲ್ಲಾ ಉಚಿತವಾಗಿ ಮರ್ಯಾದೆಮಾಡಿ ಕಂಪಿಲರಾಯನಿಗೆ ಉಡ್ರ ಗೊರೆಯನ್ನು ಕೊಟ್ಟು ರಾಮಯ್ಯನಿಗೆ ಬಳುವಳಿಯಾಗಿ ಆನೆ ಕುದುರೆಗಳು, ಕತ್ತಿಗಳು, ಆಕಳ ಹಿಂಡು, ಎಮ್ಮೆಯ ಹಿಂಡು, ಏಕಾಂತದ ಶಳೆ ಮಂಚಗಳು, ಸುಪ್ಪತ್ತಿಗೆ ಮೊದಲಾದವನ್ನೆಲ್ಲಾ ತೋರಿಸಿದನು. ಕುಮಾರಿ ರಾಮಲಾ ದೇವಿಯು ಮುಸಕನ್ನು ತೆಗೆದು ಮಾವನಿಗೆ ನಮಸ್ಕಾರ ಮಾಡಲು ಹರ್ಷಿತ ನಾದ ಕಂಪಿಲರಾಯನು ಸೊಸೆಯ ಮಂಡೆಯಮೇಲೆ ಕೈಯಿಟ್ಟು, ಹಸುಮಕ್ಕ ಳನ್ನು ಪಡೆಯೆನುತ್ತ ಹರಸಿದನು.

ಜೋಯಿಸರನ್ನು ಕರೆಯಿಸಿ, ಮಾಘ ಶುದ್ಧ ತದಿಗೆ ಗುರುವಾರ ಸೂರ್ಯೋ ದಯವಾದ ಹತ್ತು ಗಳಿಗೆಯ ಮೇಲೆ ಅಮೃತಸಿದ್ಧಿಯ ಕಾಲಕ್ಕೆ ಲಗ್ನದ ಮುಹೂರ್ತವನ್ನು ನಿಶ್ಚಯಿಸಿದನು. ಲಗ್ನವು ಐದು ದಿನ ಮಾತ್ರ ಉಳಿದಿದ್ದುದ ರಿಂದ, ಶುಭಕಾರ್ಯಗಳಿಗೆ ತಕ್ಕ ಏರ್ಪಾಟನ್ನು ಮಾಡಬೇಕೆಂದು ಪುರೋಹಿತ ರಿಗೆ ತಿಳಿಸಿ ಕಂಪಿಲರಾಯನು ತನ್ನ ಅರಮನೆಗೆ ಹೊರಟು ಹೋದನು.

ಜಗದಪ್ಪರಾಯನು ರಾಮಲಾದೇವಿಯೊಡನೆ ಐದು ಕುದುರೆಗಳನ್ನು ಕಳುಹಿಸಿರುತ್ತಾನೆ. ಆದುದರಿಂದ ಕುಮಾರ ರಾಮನಿಗೆ ಪಂಚಕನ್ಯಾ ವಿವಾಹ ವನ್ನು ಮಾಡಬೇಕೆಂದು ತಂದೆತಾಯಿಗಳೂ, ಮಂತ್ರಿ ಬೈಚಪ್ಪನೂ ನಿಶ್ಚಯಿಸಿ ದರು. ರಾಮಲಾದೇವಿಯೊಡನೆ ಮಂಚಣ್ಣನ ಮಗಳು ರಾಮಕ್ಕ ಕುಮಾ ರಾಮನ ಸೋದರ ಮಾವಂದಿರಾದ ವೆಂಕಟರಾಯ ಮತ್ತು ಮಧುಸೂದನ ರಾಯರ ಮಕ್ಕಳು ಸೋಮಾಯಿ ಮತ್ತು ಭೂಮಾಯಿ ಮತ್ತು ಬೈಚಪ್ಪನ ಕುಮಾರಿ ತಿಮ್ಮಕ್ಕ ಈ ಐದು ಕನ್ಯೆಯರೊಡನೆ ಲಗ್ನವು ನಿಶ್ಚಯಿಸಲ್ಪಟ್ಟಿತು.

೮

ರಾಮಲಾದೇವಿಯೊಡನೆ ಕುಮಾರ ರಾಮನಿಗಾಗಿ ಕಳುಹಿಸಿದ ಐದು ಕುದುರೆಗಳನ್ನು ಕುಮಾರ ರಾಮನಿಗೆ ತೋರಿಸದೆ ಕಂಪಿಲರಾಯನು ತನ್ನ ಇತರ ಐದು ಮಕ್ಕಳಿಗೆ ಇತ್ತ ಸಂಗತಿಯನ್ನು ರಾಮನು ಅರಿತವನಾಗಿ ವೈಯಾಳಿ ಬಯಲಿಗೆ ಹೋಗಿ ಕುದುರೆಗಳನ್ನು ಬಿಚ್ಚಿಕೊಂಡು ಬಂದು ತನ್ನ ಲಾಯದೊಳಗೆ ಕಟ್ಟಿಸಿದನು. ಈ ವರ್ತಮಾನವು ಕಂಪಿಲನಿಗೆ ತಿಳಿದ ಕೂಡಲೇ ಮನಸ್ಸಿನಲ್ಲಿ ಕೋಪವನ್ನು ತಾಳಿ, ಊಳಿಗದವರ ಸಂಗಡ ಹೇಳಿ ಕಳುಹಿಸಿ ಕುಮಾರ ರಾಮನನ್ನು ಕರೆಯಿಸಿದನು.

"ನಿನ್ನ ಸಹೋದರರ ಮನಸ್ಸನ್ನು ನೋಯಿಸಿ ಕುದುರೆಗಳನ್ನು ಒಯ್ದಿರುವಂತೆ ನನಗೆ ತಿಳಿಯಿತು. ಈ ಬುದ್ಧಿಯು ನಿನಗೆ ಯೋಗ್ಯವಾದುದಲ್ಲ. ಮಿಕ್ಕ ಮಾತೇನು? ನೀನು ಧೀರನಾದರೆ ಓರಗಲ್ಲ ಯಪ್ಪಟಿ ರಾಜನನ್ನು ಸೋಲಿಸಿ ಕುದುರೆ ಬೊಲ್ಲನನ್ನು ಹಿಡಿದು ತರುವುದರಲ್ಲಿ ನಿನ್ನ ಎದೆಗಾರಿಕೆಯನ್ನು ತೋರಿಸು", ಎಂದು ತಂದೆಯು ಮಗನನ್ನು ಮೂದಲಿಸಿದನು. ಈ ಮಾತನ್ನು ಕೇಳಿದ ಕೂಡಲೇ ರಾಮನು, ಬೊಲ್ಲನನ್ನು ತಂದು ತಂದೆಗೆ ಒಪ್ಪಿಸುವುದಾಗಿ ಪ್ರತಿಜ್ಞೆ ಮಾಡಿ ವೀರ ಮುಡಿಯನ್ನು ಕಟ್ಟಿ ತಾಯ ಬಳಿಗೆ ಹೋಗಿ ಓರಗಲ್ಲು ಪ್ರತಾಪ ರುದ್ರನ ಮಗ ಯಪ್ಪತ್ತಿರಾಜನನ್ನೂ, ಅವನ ಕುದುರೆ ಬೊಲ್ಲನನ್ನೂ ಹಿಡಿದು ತರುವ ಪ್ರಮೇಯವನ್ನು ಆಕೆಗೆ ಅರುಹಿ, ನಮಸ್ಕಾರ ಮಾಡಿ ಆಶೀರ್ವಾದವನ್ನು ಪಡೆದನು.

ಯಕ್ಕಟಿಗರಶಿಂಗ, ಮೀನಿಗರ ಲಕ್ಕ, ಚಿಕ್ಕತಮ್ಮುಗ, ಗುಜ್ಜಾರಿಲೋಬ, ರಕ್ಕಸ ಮಾದ, ಕರವೂರ ತಿಪ್ಪಗ ಮತ್ತು ಚುಕ್ಕ ಜೋಳುಗ ಓಬ ಮುಂತಾದ ಎಪ್ಪತ್ತೈದು ಜನ ಮಾನ್ಯೆಯರೊಡನೆ ಕುಮಾರ ರಾಮನು ಕುಮ್ಮಟದಿಂದ ಪ್ರಯಾಣ ಮಾಡಿದನು. ಕಂಪಲಿಯನ್ನು ಸೇರಿ ಅಲ್ಲಿನ ದೇವರಾದ ಸೋಮೇಶನಿಗೆರಗಿ ಮುಂದಕ್ಕೆ ಹೊರಟು ಯಮ್ಮಿಗನೂರನ್ನು ದಾಟಿದವರು ಅಲ್ಲಿಂದ ಕುರುಗೋಡಿಗೆ ಹೋಗುವ ದಾರಿಯಲ್ಲಿ ದೊಡ್ಡ ಬಸವನನ್ನು ಕಂಡು ವಂದಿಸಿದರು. ಜಟ್ಟಂಗಿ ರಾಮೇಶ್ವರನನ್ನು ವಂದಿಸುತ್ತಾ ಕಲ್ಲೂರು ಮಾರ್ಗವಾಗಿ ಪ್ರಯಾಣ ಮಾಡುತ್ತಾ ದಾರಿಯಲ್ಲಿ ಅಡ್ಡ ಬಂದ ಹಗರಿ ನದಿಯನ್ನು

ದಾಟಿ ಅಲ್ಲಿಂದ ಆದವಾನಿ, ಗೊನಗೊಂದಿ ಮಾರ್ಗವಾಗಿ ಹೊರಟು ತುಂಗ ಭದ್ರೆಯನ್ನು ದಾಟಿ ವಿಂಧ್ಯಾರಣ್ಯದ ಮೂಲಕ ನಡೆದು ಉದಯಗಿರಿಯ ಮಾರ್ಗದಲ್ಲಿರುವ ಇನಿಗೊಂಡನಪಾಳ್ಯಕ್ಕೆ ಹೋಗಿ ಇಳಿದರು. ಅಲ್ಲಿಂದ ಪ್ರಯಾಣ ಮಾಡಿ ಇಂದ್ರಕೀಲವನ್ನು ದಾಟಿ ಆಂಧ್ರ ದೇಶದ ಗಡಿಯನ್ನು ದಾಟಿ ಲಾಳ ದೇಶವನ್ನು ಹೊಕ್ಕರು. ಮುಂದಕ್ಕೆ ಪ್ರಯಾಣ ಮಾಡುತ್ತಾ ಯಾದಗಿರಿ, ರತ್ನಗಿರಿ, ವೈಲಾರಪುರ, ಧರ್ಮಾವತಿ, ನೆಲ್ಲೂರು ಪುರ ಮುಂತಾದನ್ನು ದಾಟಿ, ಶರಣರ ಮಠವನ್ನು ಸೇರಿದರು. ಅಲ್ಲಿ ಗುಂಡ ಬ್ರಹ್ಮಯ್ಯನಿಗೆ ವಂದಿಸಿ ಓರಗಲ್ಲುಪುರದ ಪ್ರತಾಪರುದ್ರನ ಪ್ರಸಿದ್ಧವಾದ ಕುದುರೆಯು ತನ್ನನ್ನು ಸೇರುವಂತೆ ವರವನ್ನು ಬೇಡಿ, ತನ್ನ ಇಷ್ಟಾರ್ಥವು ನೆರವೇರಿದ ಮೇಲೆ ಹರಕೆಯನ್ನೊಪ್ಪಿಸುವುದಾಗಿ ಭಾಷೆ ಮಾಡಿದನು.

ಆಗ್ಗೆ ಓರಗಲ್ಲಿನಲ್ಲಿ ಕಾಕತೀಯ ವಂಶದ ವೀರ ರುದ್ರರಾಯನು ರಾಜ್ಯ ಭಾರ ಮಾಡುತ್ತಿದ್ದನು. ಈತನ ಮಗನಾದ ಎಪ್ಪತ್ತಿರಾಜನು ಮುಂಗುಲಿ ರಾಯನ ಬಳಿಗೆ ಉತ್ತಮವಾದ ಅಶ್ವವನ್ನು ತರಲು ಹೋದನು. ಮುಂಗುಲಿ ರಾಯನ ಲಾಯದಲ್ಲಿ ಒಂದು ಲಕ್ಷ ಕುದುರೆಗಳಿದ್ದವು. ಎಪ್ಪತ್ತಿರಾಜನು ಆ ಕುದುರೆಯ ಲಾಯವನ್ನೆಲ್ಲಾ ಪರೀಕ್ಷಿಸಿ ಬೊಲ್ಲನೆಂಬ ಉತ್ತಮಾಶ್ವವನ್ನು ಕ್ರಯಕ್ಕೆ ಪಡೆಯಲು ಆಶಿಸಿದನು. ಅದಕ್ಕೆ ಒಂದು ಲಕ್ಷ ವರಹವನ್ನು ಕೊಟ್ಟು ಕೊಂಡು ಕೊಂಡು ಬಂದು ತನ್ನ ತಂದೆಗೆ ತೋರಿಸಲು ರುದ್ರರಾಯನು ಕುದುರೆಯನ್ನು ನೋಡಿ ಹರ್ಷಗೊಂಡು ಅದನ್ನು ನೆಲಮಾಳಿಗೆಯಲ್ಲಿಟ್ಟು ಸಂರಕ್ಷಿಸುತ್ತಿದ್ದನು. ಆ ಕುದುರೆಯ ಹಿರಿಮೆಯ ವಾರ್ತೆ ಕುಮ್ಮಟ ದುರ್ಗದ ವರೆಗೂ ಹಬ್ಬಿದ್ದಿತು.

ದೇವಿ ಶೆಟ್ಟಿಯ ಲಿಂಗನೆಂಬುವನು ಅಲ್ಲಿಗೆ ಬಂದು ರಾಮನಾಥನಿಗೆ ಕಾಣಿಸಿಕೊಂಡನು. ಉಭಯರ ಕುಶಲ ಪ್ರಶ್ನೆಗಳಾದ ತರುವಾಯ ಕುಮಾರ ರಾಮನ ಬರುವಿಕೆಯನ್ನು ವಿಚಾರಿಸಿದನು. ತಾನು ಹೊಸಮಲೆಯ ದೊರೆಯಾದ ಕಂಪಿಲನ ಮಗನೆಂದೂ, ತಂದೆಯೊಡನೆ ಮುನಿದು ಪ್ರತಾಪ ರುದ್ರನನ್ನು ಓಲೈಸಲು ಬಂದಿರುವೆನೆಂದೂ ಕುಮಾರ ರಾಮನು ನುಡಿದ ಮಾತನ್ನು ಕೇಳಿ ತಾನು ಓರಗಲ್ಲಿನ ಪ್ರತಾಪ ರುದ್ರನ ದಳವಾಯಿಯಾದ ಪಟ್ಟಣದ ಶೆಟ್ಟಿ ಲಿಂಗಣ್ಣನೆಂದೂ, ಆ ರಾಜನ ಅಪ್ಪಣೆಯಂತೆ ಕುಮಾರ ರಾಮನನ್ನು ಓರಗಲ್ಲಿಗೆ ಕರೆದುಕೊಂಡು ಹೋಗುವುದಕ್ಕೆ ಬಂದಿರುವೆನೆಂತಲೂ ತಿಳಿಸಿದನು.

ಲಿಂಗಣ್ಣನು ಕುಮಾರ ರಾಮನೊಡನೆ ಓರಗಲ್ಲಿಗೆ ಬಂದು ಪಟ್ಟಣದಲ್ಲಿ ಹೋಗುತ್ತಿದ್ದನು. ಕುಮಾರ ರಾಮನು ಮುತ್ತು, ಮಾಣಿಕ್ಯಗಳ ದಿವ್ಯಾಭರಣಗಳನ್ನೂ ಹೊನ್ನಿನ ಓಲೆಯನ್ನೂ ಧರಿಸಿದ್ದನು. ಓರಗಲ್ಲಿನ ಹಸ್ತಿನಿ, ಚಿತ್ರಿನಿ, ಪದ್ಮಿನಿ, ಶಂಕಿನಿ ಜಾತಿಯ ಸತಿಯರು ರಾಮನ ರೂಪವನ್ನು ನೋಡೀ ಹೆರೆ ಹಿಂಗಿ ಬೆರಗಾಗಿ, ಗೋಡೆಯ ಚಿತ್ರದಂತೆ ನಿಂತು ಕೊಂಡಿದ್ದರು; ಇನ್ನು ಕೆಲವರು ಮೈ ಮರೆತು ಕಂಕುಳಲ್ಲಿ ಎತ್ತಿಕೊಂಡಿದ್ದ ಮಕ್ಕಳನ್ನು ಕೆಳಕ್ಕೆ ಬಿಟ್ಟರು. ಮತ್ತೆ ಕೆಲವರು ನೆತ್ತಿಯ ಮೇಲಿದ್ದ ಕೊಡಗಳನ್ನ ಕೈ ಮರೆತು ಬಿಟ್ಟು ಬಿಟ್ಟರು. ಇಂಥ ರೂಪವಂತನನ್ನು ಪಡೆದ ತಾಯಿಯು ಪುಣ್ಯವಂತಳೆಂದು ಕೋಮಲೆಯರು ಕೊಂಡಾಡಿದರು. ಮತ್ತೊಬ್ಬಳು ಕಾಮ ತಾಪದಿಂದ ಮೂರ್ಛೆ ಹೊಂದಿದಳು.

ರಾಮನಾದರೋ ವಿರಹದಿಂದ ತಾಪಪಡುತ್ತಿದ್ದ ಆ ಸತೀಮಣೀಯರನ್ನು ಕಂಡು ಮಕ್ಕಳು, ಹಡೆದ ತಾಯಿಯನ್ನು ಕಾಣುವಂತೆಯೂ, ಒಡಹುಟ್ಟಿದ ಸಹೋದರಿಯರನ್ನು ಕಾಣುವಂತೆಯೂ ತಿಳಿದು, ಇವರು ಹರಿಯಾಲದೇವಿಗೆ ಸಮಾನರೆಂದು ತನ್ನಲ್ಲಿ ತಾನು ಮಾತನಾಡಿಕೊಂಡನು. ಪರನಾರೀ ಸಹೋದರ ರಾಮ, ಪರದಳ ರಣಭಯಂಕರ ರಾಮ, ಪರರಾಯದಲ್ಲಣ ರಾಮ, ಎಂದು ಭಟರ ಹೊಗಳಿಕೆಯೂ ಕಹಳೆಗಳು ಮೊಳಗಿದವು.

ಲಿಂಗಣ್ಣನು ನಗರದ ಉಪ್ಪರಿಗೆ ಚಂದ್ರಸಾಲೆಗಳನ್ನು ತೋರಿಸುತ್ತಾ ಬಂದನು. ಅಂಗಡಿಯ ಸಾಲೂ ಮತ್ತು ಉಪ್ಪರಿಗೆಗಳನ್ನೂ, ಉಪ್ಪರಿಗೆಗಳ ಮೇಲಿದ್ದ ಪುರಜನರನ್ನೂ ಆದರದಿಂದ ನೋಡುತ್ತ ಕಂದರ್ಪರೂಪನಾದ ರಾಮನು ಕುದುರೆಯನ್ನು ಏರಿ ಸಂಭ್ರಮದಿಂದ ತನ್ನ ಪರಿವಾರದೊಡನೆ ಬೀದಿಗಳಲ್ಲಿ ಬರುತ್ತಾ ಅರಮನೆಯ ಹುಲಿಯೇರ ಬಾಗಿಲನ್ನು ಹೊಕ್ಕು ಪ್ರತಾಪರುದ್ರನ ಓಲಗಕ್ಕೆ ಬಂದನು. ಆಗ ಬಿರುದುಗಳ ಮಾನ್ಯೆಯರು, ಮಕುಟವರ್ಧನರು, ರಾಜಕುವರರು, ಮಂತ್ರೀಶರು, ರಾವುತರು ರಾಯರು ಮುಂತಾದವರಿಂದ ಓಲೈಸಿ ಸಿಂಹಾಸನಾರೂಢನಾದ ಪೊಡವಿಪಾಲನನ್ನು ನೋಡಿ ರಾಮನು ತಾರೆಗಳೆಡೆಗೆ ಚಂದ್ರನು ಬರುವಂತೆ ಆ ಸಭೆಯನ್ನು ಪ್ರವೇಶಿಸಿದನು. ಸಭಿಕರು ರಾಮನ ರೂಪವನ್ನು ನೋಡಿ ಕೊಂಡಾಡಿದರು. ರಾಮನು ರುದ್ರರಾಯನಿಗೆ ಕಾಣಿಕೆಯನ್ನರ್ಪಿಸಿದನು. ಸಂತೋಷ ಹೊಂದಿದ ರಾಜನೂ, ಎಪ್ಪತ್ತಿ ರಾಯನೂ ರಾಮನಿಗೆ ಅರ್ಥಿಯಿಂದ ಕಂಠಮಾಲೆಯನ್ನೂ ಉಡುಗರೆಗಳನ್ನೂ

ಕೊಟ್ಟರು. ಆ ಹೊತ್ತಿಗೆ ಸೂರ್ಯಾಸ್ತಮಯವಾಗಲು ರಾಜನು ರಾಮನಿಗೆ ಉತ್ತಮವಾದ ಬಿಡಾರವನ್ನು ಮಾಡಿಕೊಡಬೇಕೆಂದು ಲಿಂಗಣ್ಣನಿಗೆ ಹೇಳಿ ಚಾವಡಿಯಿಂದಣ್ಣಿಳಿದು ಅರಮನೆಗೆ ಹೋದನು.

ರಾಜನಿಂದ ಬೀಳ್ಕೊಟ್ಟ ರಾಮನು ಬಿಡದಿಗೆ ಹೋಗುತ್ತಿದ್ದಾಗ ರಾಮನನ್ನು, "ಅಳ್ಳಿದೆಯ ರಾಯರ ಗಂಡ, ಬಲ್ಲಿದಾನೇಮಿಯಗಂಡ, ದಿಳ್ಳಿ ಸುಲ್ತಾನನ ಗಂಡ, ಸತ್ತಿಗೆಯ ನೆಳಲಲ್ಲಿ ಬರುವ ಮಾಂಡಲಿಕರ ನೆತ್ತಿಯ ಶೂಲ ರಾಮಯ್ಯ, ನರಪತಿ, ನಗಪತಿ, ಅಶ್ವಪತಿಗಳೆಂಬ ಅರಸುಗಳ ಗಂಡ, ಜಗದಪ್ಪ ಮೊದಲಾದ ರಾಯರ ಗಂಡ, ಪರನಾರಿ ಸಹೋದರ ರಾಮಯ್ಯ" ಮುಂತಾದ ಬಿರುದುಗಳನ್ನು ಹೊಗಳುತ್ತ ಭಟರು ಮುಂದೆ ಸಾಗುತ್ತಿದ್ದರು. ಈ ಬಿರುದುಗಳನ್ನು ರುದ್ರರಾಯನು ಕೇಳಿ ಒಳಗೇ ಕಡುಕೋಪಗೊಂಡನು. ಅವನ ಸಹನೆ ಮೀರಿತು.

ರಾಯನ ಕಡೆಗಣ್ಣು ಕಿಡಿ ಸೂಸಿದವು, ಕುಡಿಮೀಸೆ ಕುಣಿದಾಡಿತು, ಹುಬ್ಬುಗಳನ್ನು ಗಂಟಿಕ್ಕಿದನು, ನಮ್ಮ ಬಳಿಗೆ ಓಲೈಸಲು ಬಂದ ರಾಮನು ಹಮ್ಮಿನ ಬಿರುದುಗಳನ್ನು ಹೊಗಳಿಸಿಕೊಂಡು ನಮ್ಮನ್ನೇ ಅವಮಾನಿಸುತ್ತಿರುವನಲ್ಲ? ನಮ್ಮ ಮಾಂಡಲಿಕರಿಗೆ ಅವಮಾನವಾಗುತ್ತಿದೆಯಲ್ಲಾ! ಎನ್ನುತ್ತಾ ರುದ್ರರಾಯನು ದಳವಾಯಿ ಲಿಂಗಣ್ಣನನ್ನು ಕರೆಸಿ ರಾಮನ ಉದ್ಧಟತನವನ್ನು ತಿಳಿಸಿ ಅವನನ್ನು ಹಿಡಿದು ತಂದು ತನಗೆ ಒಪ್ಪಿಸಬೇಕೆಂದು ಸೇನಾಧಿಕಾರಿ ಲಿಂಗಣ್ಣನಿಗೆ ಆಜ್ಞಾಪಿಸಿದನು. ಅದಕ್ಕೆ ಲಿಂಗಣ್ಣನು ವಿನಯದಿಂದ ದೊರೆಗೆ,

"ರಾಮನು ಬಿರುದುಗಳ ಭಂಟನಲ್ಲವೇ! ಜಗದಪ್ಪರಾಯನನ್ನೂ, ನೇಮಿಯ ಸೈನ್ಯವನ್ನೂ ಸೋಲಿಸಿದುದರಿಂದ ಪಡೆದ ಬಿರುದುಗಳನ್ನುಳ್ಳ ಭಂಟನೇ ಹೌದು. ಅವುಗಳನ್ನು ಧರಿಸಲು ರಾಮನು ಯೋಗ್ಯನಲ್ಲದೆ ತಲ್ಲಣಿಸುವ ಹೇಡಿಗಳಿಗುಂಟೆ!"

—ಎಂದು ವಿಜ್ಞಾಪಿಸಿಕೊಂಡನು. ಈ ಮಾತುಗಳು ರಾಯನಿಗೆ ಸಹಿಸಲಿಲ್ಲ.

"ರಾಮನು ಬಿರುದುಗಳನ್ನು ಬಿಟ್ಟರೆ ನನ್ನಲ್ಲಿರಲಿ. ಹಾಗೆ ಮಾಡದೆ ಅವನು ಪಂಥವನ್ನು ಮಾಡಿದನಾದರೆ ಅವನ ಬಲವನ್ನು ಮುರಿದು ಸೆರೆಮನೆಗೆ ಕಳಿಸುವೆನು."

—ಎಂದ ರಾಮನ ಮಾತನ್ನು ಕೇಳಿ ದೇವಿ ಶೆಟ್ಟಿಲಿಂಗನು ರಾಮನ

ಬಳಿಗೆ ಹೋಗಿ ರಾಯನಾಡಿದ ಮಾತುಗಳನ್ನು ತಿಳಿಸಿದನು. ರಾಮನು ಅಬ್ಬರಿಸಿ ಕೋಪವನ್ನು ತಾಳಿದನು. ಅವನೊಡನಿದ್ದ ಕಾಟಣ್ಣನು,

"ಕಂಪಿಲನ ಮಗ ರಾಮಯ್ಯನು ಹಬ್ಬಿದ ಬಿರುದುಗಳನ್ನು ಬಿಡುವವನೇ! ಅವನು ಮುನಿದರೆ ರುದ್ರರಾಯನೊಡನೆ ಕಾದಿ ಅವನನ್ನು ಸೋಲಿಸಿ ಅವನ ದಂಡನ್ನು ಕತ್ತರಿಸಿ ಕುಪ್ಪೆ ಹಾಕಿ ಅವನ ಪಟ್ಟಣವನ್ನು ಸುಟ್ಟು ಹಣೆಗೆ ಬಟ್ಟನ್ನಿಡುವನು ಇದಕ್ಕೆ ಸಂದೇಹವಿಲ್ಲ," ಎಂದು ಉಸಿರಿದನು.

ದೇವಿಶೆಟ್ಟಿಲಿಂಗನು ಬಂದು ಹೇಳಿದ ಆ ಮಾತನ್ನು ಕೇಳಿ ರುದ್ರರಾಯನು ಸಹಿಸಲಿಲ್ಲವಾದುದರಿಂದ ರಾಮಯ್ಯನನ್ನು ಸೆರೆ ಹಿಡಿಯಲು ನಿಶ್ಚಯಿಸಿದನು.

ದೇವಿಶೆಟ್ಟಿಗೆ ಈ ಕಾರ್ಯ ಇಚ್ಛೆಯಿರಲಿಲ್ಲ; ಪಟ್ಟಣದಲ್ಲಿಯೇ ಉಳಿದರೆ ರುದ್ರರಾಯನು ತನ್ನನ್ನು ಮುತ್ತಿ ತೊಂದರೆ ಕೊಡುವನೆಂದು ಅವನು ತಿಳಿದು, ತನ್ನಲ್ಲಿದ್ದ ಮುತ್ತು ಮಾಣಿಕ್ಯವನ್ನು ಪೆಟ್ಟಿಗೆಯುಲ್ಲಿ ತುಂಬಿಸಿ ಇನ್ನು ಹೆಚ್ಚಾದ ಹೊನ್ನುಗಳನ್ನು ತನ್ನನ್ನು ಸೇವಿಸಿದ ವೀರರಿಗೆ ಹಂಚಿದನು. ತನ್ನ ಅರಮನೆಗೆ ತಾನೇ ಬೆಂಕಿಯನ್ನು ಹಚ್ಚಿ ಭಸ್ಮ ಮಾಡಿ ಚಾವಡಿಗೆ ಹೊರಟು ತನ್ನನ್ನು ಹಿಂಬಾಲಿಸುವ ವೀರರನ್ನು ಕರೆದುಕೊಂಡು ಕುದುರೆಗಳನ್ನು ಏರಿ ರಾಮಯ್ಯನೊಡನೆ ಸೇರಲು ಹೊರಟನು. ಈ ಸಂಗತಿಯನ್ನು ಕೆಲವರು ಮಾನ್ಯರು ರುದ್ರರಾಯನಿಗೆ ಚಾಡಿ ಹೇಳಲು ಕುಪಿತನಾದ ರುದ್ರರಾಯನು ದೇವಿಶೆಟ್ಟಿ ಲಿಂಗಣ್ಣನನ್ನು ಹಿಡಿದು ತರುವಂತೆ ಅಪ್ಪಣೆ ಮಾಡಿದನು.

ರುದ್ರರಾಯನು ಕಳುಹಿಸಿದ ಕುದುರೆಯ ರಾವುತರು ಲಿಂಗಣ್ಣನನ್ನು ಮುತ್ತಿ ಅವನ ಪರಿವಾರದವರನ್ನು ಒಕ್ಕಲಿಕ್ಕಿದರು. ಇದನ್ನು ನೋಡಿ ಕುಮಾರರಾಮನು ತನ್ನವರಿಗೆ ಅಪ್ಪಣೆ ಕೊಟ್ಟು ಕಳುಹಲು ಅವರು ರುದ್ರರಾಯನ ದಂಡನ್ನು ಮುತ್ತಿದರು. ಉಭಯ ಸೈನ್ಯಕ್ಕೂ ಕತ್ತಿಯ ಕದನವಾಯಿತು. ರುದ್ರರಾಯನ ಬಲವು ಮುರಿದೋಡಿತು. ಆದರೆ ರುದ್ರರಾಯನ ಕುದುರೆಯವರು ರಾಮನ ದಂಡನ್ನು ಮುತ್ತಿದರು. ಬಾಣಗಳ ಮಳೆಯು ಸುರಿಯಿತು. ರಾಮನ ದಂಡನ್ನು ಒಕ್ಕಲಿಕ್ಕಲು ರಾಮನ ಕಡೆಯವರು ಹಿಮ್ಮೆಟ್ಟಿದರು. ಹಿಮ್ಮೆಟ್ಟಿದ ತಮ್ಮ ದಂಡನ್ನು ಕುಮಾರರಾಮನು ನೋಡಿ ನಸು ನಗುತ್ತ ತಾನೇ ವೇಗದಿಂದ ರುದ್ರರಾಯನ ದಂಡನ್ನು ಮುತ್ತಿದನು. ಇದನ್ನು ಕಂಡ ರುದ್ರರಾಯನ ದಳದವರು

ತಮ್ಮ ಬಲವನ್ನು ಇಮ್ಮಡಿಸಿದರು. ಆದರೂ ಕಾಟಣ್ಣ, ದೇವಿಶೆಟ್ಟಿ ಲಿಂಗಣ್ಣ, ರಾಮಯ್ಯ ಮತ್ತು ಇತರ ಪರಿವಾರದವರು ಶತ್ರುಗಳನ್ನು ಮೆಟ್ಟಿ ಕತ್ತಿಗಳಿಂದ ಸೀಳಿದರು. ತುರುಗಗಳನ್ನು ಕಡಿದರು. ರಕ್ತದ ಹಳ್ಳವು ಹರಿಯಿತು. ಅಸಮ ಸಾಹಸಿ ರಾಮನು ಬೆನ್ನಟ್ಟಿ ಬರುತ್ತಿರಲು ರುದ್ರರಾಯನ ದಂಡು ಮುರಿದು ಮುಸುಕು ಹಾಕಿಕೊಂಡು ಪಟ್ಟಣಕ್ಕೆ ಓಡಿತು. ಈ ಸುದ್ದಿಯನ್ನು ಕೇಳಿ ರುದ್ರರಾಯನು ಕಡುಕೋಪಗೊಂಡನು. ರಾಮನ ದಂಡನ್ನು ಕಡಿದು ಹೊಸ ಮಲೆಗೆ ಧಾಳಿ ಇಡುವೆನು ಎಂದು ಘುಡಿ ಘುಡಿಸಿ ಅಕ್ಕ ಪಕ್ಕದಲ್ಲಿ ಕುಳಿತಿದ್ದ ಮಕುಟ ವರ್ಧನರನ್ನು ನೋಡಿ ಗದ್ದಿಗೆಯಿಂದ ಏಳುತ್ತಿರಲು ಕುಮಾರ ಎಪ್ಪತ್ತಿರಾಜನು ತಂದೆಯ ಚರಣಗಳಿಗೆ ನಮಸ್ಕಾರ ಮಾಡಿ ತನಗೆ ಅಪ್ಪಣೆಯನ್ನು ಕೊಡಬೇಕೆಂದನು.

"ಸರದಾರನೂ ಮಾಂಡಲಿಕರೂ ಯುದ್ಧಕ್ಕೆ ಹೋಗಿ ರಾಮನಿಗೆ ಬೆನ್ನು ಕೊಟ್ಟು ಬಂದವರಿರುವಾಗ ನಿನ್ನ ಪರಾಕ್ರಮವೆಂತಹುದು?" ಎಂದು ರಾಯನು ನುಡಿಯಲು ಎಪ್ಪತ್ತಿರಾಜನು,

"ತಾವು ಸುಲ್ತಾನರಂಥ ಪ್ರಬಲ ಶತ್ರುಗಳೊಡನೆ ಮಾತ್ರ ಕಾಳಗವಾಡಬೇಕೇ ಹೊರತು ರಾಮನಂತಹ ಸಣ್ಣ ಸರದಾರರ ಮೇಲೆ ಛಲವನ್ನು ಮಾಡಕೂಡದು. ನನಗೆ ಕೂಡಲೇ ಅಪ್ಪಣೆಯನ್ನು ಕೊಟ್ಟು ಕಾಳಗಕ್ಕೆ ಕಳುಹಿಸಿದರೆ ಧಾಳಿಯನ್ನು ಮಾಡಿ ರಾಮನನ್ನು ಸೆರೆ ಹಿಡಿದು ತರುವೆನು. ಅವನ ಮಾನ್ಯೆಯರನ್ನು ಜೋಡಿಸಿ ಕಡಿಯುವೆನು. ಹೊಸ ಮಲೆ ದುರ್ಗವನ್ನು ಹೇಳಲು ಹೆಸರಿಲ್ಲದಂತೆ ಮಾಡುವೆನು," ಎಂದ ನುಡಿಯನ್ನು ಕೇಳಿ ರುದ್ರರಾಯನು ಮಗನನ್ನು ಸಂತೋಷದಿಂದ ಅಪ್ಪಿಕೊಂಡನು.

ಬೊಲ್ಲನನ್ನು ತರಿಸಿ ಗಂಧಪುಷ್ಪ ಪರಿಮಳದಿಂದ ಅದನ್ನು ಪೂಜಿಸಿದನು. ಅದಕ್ಕೆ ಕಡಲೆಯನ್ನು ತಿನ್ನಿಸಿ ನೀರನ್ನು ಕುಡಿಸಿ ಶೃಂಗಾರ ಮಾಡಿದನು. ಎಪ್ಪತ್ತಿರಾಜನು ತಲೆಗೆ ಚೌಳಿಯನ್ನಿಟ್ಟು ವೀರ ಜಡೆಯನ್ನು ಧರಿಸಿ, ಬೊಲ್ಲನಿಗೆ ನಮಸ್ಕಾರ ಮಾಡಿ ಉತ್ಸಾಹದಿಂದ ಅದನ್ನು ಏರಿದನು. ಐವತ್ತು ಸಾವಿರ ಕುದುರೆ ಕಟ್ಟಾಳುಗಳಿಂದ ಯುದ್ಧಕ್ಕೆ ಹೊರಟನು. ತಮ್ಮಟೆ, ಭೇರಿ, ಚಿನ್ನ ಕಹಳೆಗಳು ಮೊಳಗಿದವು.

"ಅರಿರಾಯದಲ್ಲಣ" ಎಂಬ ಬಿರುದನ್ನು ಸಾರುತ್ತ ಧೀರತನದಿಂದ ಮುಂದೆ ನಡೆದರು. ತನ್ನ ಸೇನೆಯ ಬೆನ್ನು ಹತ್ತಿ ಖಡ್ಗದಿಂದ ಕಡಿಯುತ್ತ

ಮುಂದಕ್ಕೆ ಬರುತ್ತಿರುವ ಎಪ್ಪತ್ತಿರಾಜನನ್ನು ಕಣ್ಣು ತುಂಬ ನೋಡಿ, ರಾಮನು ನೀಲನನ್ನು ಏರಿ ಇನ್ನು ಮೇಲೆ ನನಗೆ ಸರಿಜೋಡಿಯು ಒದಗಿತು ಎಂದು ತನ್ನ ಮಾನ್ಯೆಯರನ್ನು ಹಿಂದಕ್ಕೆ ಬಿಟ್ಟು ಎಪ್ಪತ್ತಿರಾಜನ ಇದಿರಾದನು. ಶತ್ರು ಸೈನ್ಯ ಹೊಕ್ಕು ಎಕ್ಕಟಿ ಮಾಂಡಲೀಕರನ್ನು ತನ್ನ ಖಡ್ಗದಿಂದ ಸಂಹರಿಸುತ್ತ ಎಪ್ಪತ್ತಿರಾಜನನ್ನು ಮುತ್ತಿದನು. ಉಭಯರಿಗೂ ಹಲವು ಸಾಹಸದ ಕದನಗಳಾದವು.

'ಭಲರೇ! ಭಾಪುರೇ! ಜಗಜಟ್ಟಿ ಛಲದಂಕ' ಎಂದು ಉಭಯರನ್ನೂ ಭಟರು ಹೊಗಳುತ್ತಿರಲು ರಾಮನ ಖಡ್ಗದೇಟನಿಂದ ಉಪ್ಪತ್ತಿರಾಜನು ಕೆಳಕ್ಕೆ ಬಿದ್ದನು. ಕೂಡಲೇ ಬೊಲ್ಲನು ರಾಮನಾಥನ ಬಳಿಗೆ ಬಂದು ತನ್ನ ಬೆನ್ನನ್ನು ಕೊಟ್ಟಿತು.

ರಾಮನು ಕುದುರೆಯು ತನಗೆ ಸಾಧ್ಯವಾದುದನ್ನು ಕಂಡು ಅದನು ಏರಿ ಕೋಟೆಯನ್ನು ನೆಗೆಸಿದನು. ಆದರೆ ಆಗ ಅದರ ಬಾರು ಹರಿಯಿತ್ತು ಆ ಕ್ಷಣವೇ ಮಾದಿಗ ಹಂಪನು ತನ್ನ ಒಳತೊಡೆಯ ಚರ್ಮವನ್ನು ತೆಗೆದು ಕುದುರೆಯ ಬಾರಿಗೆ ಸಂತೋಷದಿಂದ ಹೊದಿಸಿದನು. ರಾಮನು ಸಂತೋಷ ಹೊಂದಿ ಹಂಪನಿಗೆ "ನಿನ್ನ ಪ್ರಾಣಕ್ಕೆ ನನ್ನ ಜೀವವನ್ನು ಕೊಡುವೆನು" ಎಂದು ಭಾಷೆ ಕೊಟ್ಟು ಸ್ವಲ್ಪ ದೂರ ಮುಂದಕ್ಕೆ ಹೋಗಿ ದೇವಿಶೆಟ್ಟಿ ಲಿಂಗನನ್ನು ಕರೆದುಕೊಂಡು ಬರಲು ಚಾರರನ್ನು ಊರೊಳಕ್ಕೆ ಕಳುಹಿಸಿದನು. ಅಷ್ಟು ಹೊತ್ತಿಗೆ ಅರಗಣ್ಣು ತೆಗೆದು ಎಚ್ಚೆತ್ತಿದ್ದ ಉಪ್ಪತ್ತಿ ರಾಜನು ಅಲ್ಲಿ ನೆರೆದಿದ ಮಾನ್ಯೆಯರನ್ನು ಮನೆಗೆ ಕಳುಹಿಸಿ ತಾನೂ ಅರಮನೆಗೆ ಕಳುಹಿಸಿ ತಾನೂ ಅರಮನೆಗೆ ಹೊರಟುಹೋದನು.

ಅನಂತರದಲ್ಲಿ ಹರುಷದಿಂದ ದೇವಿಶೆಟ್ಟಿಲಿಂಗನು ಓರಗಲ್ಲನ್ನು ಬಿಟ್ಟು ಹೊರಗೆ ಬಂದು ರಾಮನನ್ನು ಸೇರಿದನು. ಅದೇ ಸಮಯದಲ್ಲಿ ಕೋಟೆಯ ಹೊರಗಿದ್ದ ಪ್ರತಾಪ ರುದ್ರನ ಸೇನೆಯು ರಾಮನ ಸೇನೆಯ ಮೇಲೆ ಬಿದ್ದಿತು. ಉಭಯ ದಳದವರೂ ಬಹಳವಾಗಿ ಹೋರಾಡಿದರು. ರಾಮನ ಕೈ ಮೇಲಾಗಲು ಶತ್ರುಗಳು ಓರಗಲ್ಲು ಪಟ್ಟಣಕ್ಕೆ ಹಿಮ್ಮೆಟ್ಟಿಹೋಗಿ ಕೋಟೆಯನ್ನು ಸೇರಿಕೊಂಡರು. ರಾಮನ ಕಡೆಯಲ್ಲಿ ಚದುರಿಹೋಗಿದ್ದ ಸರದಾರರು ರಾಮನ ಹತ್ತಿರ ಬಂದು ಸೇರಿದರು. ಅನಂತರ ರಾಮನು ಧರ್ಮ ಕಹಳೆಯನ್ನು ಹಿಡಿಸಿದನು. ಅಲ್ಲಿಂದ ಹೊರಟು ಶರಣರ ಮಠವನ್ನು ಹೊಕ್ಕು ಶರಣರಿಗೆ

ವಂದಿಸಿ ಕುಮ್ಮಟದ ಮಾರ್ಗವಾಗಿ ಹಿಂತಿರುಗಿದನು. ದಾರಿಯಲ್ಲಿ ಪ್ರತಾಪ ರುದ್ರನ ಮಿತ್ರ ಬಾಬಾಜಿಯು ಈ ಸೈನ್ಯವನ್ನು ಕಂಡು ತಡೆದನು. ಸಣ್ಣ ಕಾಳಗವು ಜರುಗಿತು. ಗುಜ್ಜಲ, ಓಬ, ಚಿಕ್ಕತಿಮ್ಮ ಮತ್ತು ಚಿನ್ನ ಮಾದ ಇವರು ಸಹಿತವಾಗಿ ಬಾಬಾಜಿಯನ್ನು ಸೋಲಿಸಿ ಮುಂದಕ್ಕೆ ನಡೆದರು.

ದೇವಿಶೆಟ್ಟಿ ಲಿಂಗ, ಮಾದಿಗರ ಹಂಪ, ಸಂಪಯ್ಯ ಮುಂತಾದ ಐವರು ಮಾನ್ಯರು ರಾಮನೊಡನೆ ಬರುತ್ತಿದ್ದರು. ಕಾಶ್ಮೀರ ರಾಜನು ಹನ್ನೆರಡು ಸಾವಿರ ಬಲದೊಡನೆ ರಾಮನನ್ನು ಅಡ್ಡಗಟ್ಟಿ ರುದ್ರರಾಯನ ಮಗನ ಕುದುರೆಯನ್ನು ಬಿಟ್ಟುಕೊಡಬೇಕೆಂದು ರಾಮನನ್ನು ತಡೆದನು. ರಾಮನ ಬಲವು ಅವನ ಮೇಲೆ ಬೀಳಲು ಕಾಶ್ಮೀರನ ಬಲವು ಗಾಯಗೊಂಡು ಅಡೆ ಎದ್ದು ಮುರಿದು ಅಡವಿ ಪಾಲಾಗಿ ಓಡಿಹೋಯಿತು.

ರಾಮನು ಮುಂದಕ್ಕೆ ಹೊರಟು ಮೂರು ಗಾವುದ ನಡೆದು ಸಿದ್ದವಟ್ಟವನ್ನು ಸೇರಿದನು. ಅಲ್ಲಿ ರಾತ್ರಿಯನ್ನು ಕಳೆದು ಹೊಳೆಯನ್ನು ದಾಟಿ ಮುಂದಕ್ಕೆ ಪ್ರಯಾಣ ಮಾಡಿ ಯಾದವಗಿರಿಯನ್ನು ಸೇರಿದನು. ಹೊಳೆಯ ದಂಡೆಯಲ್ಲಿ ಬೀಡು ಬಿಟ್ಟು ಅಡಿಗೆ ಮಾಡಿಸಿ ರಾತ್ರಿಯಲ್ಲಾ ಪ್ರಯಾಣ ಮಾಡಿ ಆದವಾನಿಗೆ ಬಂದು ಸೇರಿದನು. ವಿನೋದದಿಂದ ಹೊಳೆಯ ದಂಡೆಯಲ್ಲಿ ಕೆಲವು ಕಾಲ ಕಳೆದು ನದಿಯಲ್ಲಿ ಸ್ನಾನ ಮಾಡಿ ದೇವ ಪೂಜಾ ನಂತರ ಭೋಜನವನ್ನು ಮಾಡಿ ಬೊಲ್ಲನನ್ನು ಏರಿ ಕುರುಗೋಡಿಗೆ ಬಂದಿಳಿದನು. ಅಲ್ಲಿ ಮೂರು ದಿವಸ ಬೀಡು ಬಿಟ್ಟಿದ್ದನು. ಈ ವರ್ತಮಾನವನ್ನು ಕಂಪಿಲನು ಕೇಳಿ ಆನಂದಪಟ್ಟು ರಾಮನನ್ನು ಎದುರುಗೊಳ್ಳಲು ಕುರುಗೋಡು ಮಾರ್ಗವಾಗಿ ಹೊರಟನು.

ಅನಂತರದಲ್ಲಿ ರಾಮಯ್ಯನು ಕುರುಗೋಡಿನಿಂದ ಪ್ರಯಾಣ ಮಾಡಿ ಕಂಪಿಲಿಗೆ ಬಂದಿಳಿದು ಸೋಮೇಶನಿಗೆ ವಂದಿಸಿದನು. ಅಲ್ಲಿಗೆ ಬಂದ ತಂದೆಯನ್ನು ಕಂಡು ರಾಮನು ಅವನಿಗೆ ವಂದಿಸಿದನು. ದೇವಿಶೆಟ್ಟಿ ಲಿಂಗಣ್ಣನನ್ನೂ ವೀರ ಮಾದಿಗ ಹಂಪನನ್ನೂ ತಂದೆಗೆ ತೋರಿಸಿ ಅವರ ಸಹಾಯದಿಂದಲೇ ಬೊಲ್ಲನನ್ನು ತಂದುದಾಗಿ ತಿಳಿಸಿದನು. ಕಂಪಿಲನು ಬೊಲ್ಲನನ್ನು ಎದುರಿಗೆ ಕರೆಸಿ ನೋಡಿ ರಾಮನಿಗೆ ತಕ್ಕಂಥ ಕುದುರೆಯನ್ನು ಜಟ್ಟಿಂಗಿ ರಾಮೇಶ್ವರನು ಒಲಿದುಕೊಟ್ಟನು ಎಂದು ಸಂತೋಷದಿಂದ ದೇವಿಶೆಟ್ಟಿ ಲಿಂಗಣ್ಣನಿಗೆ ರಾಮನ ಕುದುರೆಯಾಗಿದ್ದ ನೀಲನನ್ನೂ ಪಟ್ಟಾವಳಿಗಳನ್ನೂ

ಕೊಟ್ಟನು. ಹಂಪನಿಗೆ ಬಂಗಾರದ ಸರಪಳಿ, ಮತ್ತು ಉಡುಗರೆಗಳನ್ನು ಕೊಟ್ಟು ಮನ್ನಿಸಿದನು. ಗುಜ್ಜುಲೋಬನು, ಚಿನ್ನಮಾದನು ಓರಗಲ್ಲಿಗೆ ಹೋಗಿ ಎಪ್ಪತ್ತಿರಾಜನನ್ನು ಸೋಲಿಸಿ ಬೊಲ್ಲನನ್ನು ಗೆದ್ದು ತಂದ ಕಥೆಯನ್ನು ವೀರಾವೇಶದಿಂದ ಹೇಳಲು ಕೇಳಿ ಸಂತಸಗೊಂಡ ಕಂಪಿಲರಾಯನು ಆ ಮಾನ್ಯೆಯರಿಗೆಲ್ಲಾ ಬಿರುದು ಬಾವಲಿಗಳನ್ನು ಕೊಟ್ಟು ಮನ್ನಿಸಿದನು.

ಮೂರು ಸಾವಿರ ಬಲವೂ ಮುನ್ನೂರು ಕುದುರೆಯೂ ಸಹಿತವಾಗಿ ರಾಮಯ್ಯನು ಭೇರಿ ಮೊದಲಾದ ವಾದ್ಯಗಳೊಡನೆ ಊರಿಗೆ ಹೊರಟು ಹೊಳೆಯನ್ನು ದಾಟಿ ಹೊಸ ಮಲೆಗೆ ಬರಲು ಹರಿಯಾಲದೇವಿಯು ಅರಮನೆಯ ನಾರಿಯರೊಡನೆ ರಾಮಯ್ಯನಿಗೆ ಆರತಿಗಳನ್ನು ತಂದು ಎತ್ತಿದಳು. ರಾಮಯ್ಯನು ಭಿನ್ನವಿಲ್ಲದೆ ಎದುರುಗೊಂಡ ಎಲ್ಲರನ್ನೂ ಮನ್ನಿಸಿ ತನ್ನ ಅರಮನೆಗೆ ಹೋಗಿ ತನ್ನ ಸತಿಯರೊಡನೆ ಭೋಜನ ಮಾಡಿದನು.

## ೬

ಕುಮಾರ ರಾಮನು ಜಟ್ಟಂಗಿ ರಾಮೇಶನ ದಯದಿಂದ ಎಪ್ಪತ್ತಿ ರಾಜನನ್ನು ಸೋಲಿಸಿ ಹೆಸರುವಾಸಿಯಾದ ಅವನ ಬೊಲ್ಲನೆಂಬ ಕುದುರೆಯನ್ನು ಹಿಡಿದು ತಂದು ಕುಮ್ಮಟ ದುರ್ಗದಲ್ಲಿ ಸುಖದಿಂದ ಇರುತ್ತಿದ್ದನು. ಹುಳಿಯಾರು ಪಟ್ಟಣದ ಮಾರಭೂಪನು ತನ್ನ ಸರದಾರರ ಮತ್ತು ಸುತ್ತಣರಾಯರ ಸಹಾಯದಿಂದ ರಾಮನೊಡನೆ ಕಾದುವ ಆಸೆಯಿಂದ ತನ್ನ ಮಂತ್ರಿಯೊಡನೆ ಆಲೋಚಿಸಿದನು.

"ಕುಮ್ಮಟದ ಅರಸನಾದ ಕುಮಾರ ರಾಮನಾಥನು ಓರಗಲ್ಲಿಗೆ ಹೋಗಿ ಆ ರಾಜನ ಕುದುರೆಯನ್ನು ಹಿಡಿದು ತಂದನಂತೆ; ಕಳ್ಳ ಬೇಡನಿಗೆ ಇಷ್ಟು ಅಹಂಕಾರವೇ! ಅವನ ಬೂಟಾಟಿಕೆಯನ್ನು ಓಡಿಸುವೆನು. ತೋಟಗಾರನು ಕಳೆ ಬಳ್ಳಿಯನ್ನು ಕೊಯ್ಯುವಂತೆ ಕುಮ್ಮಟದವರನ್ನು ಕತ್ತರಿಸಿ ಹಳ್ಳಿಯನ್ನು ಮಾಡಿ ಆಳುವೆನು. ಗುತ್ತಿಯ ಜಗದಪ್ಪರಾಯನನ್ನು ಕತ್ತಿಯ ಜಗಳದಲ್ಲಿಗೆದ್ದು ಅವನಮಗಳನ್ನು ಮದುವೆಯಾದೆನು" ಎಂಬ ಅಹಂಕಾರದಿಂದ ಸುತ್ತಣರಾಯರ ಗಂಡನೆಂದು ಹೊಗಳಿಸಿಕೊಂಡು ಮದಿಸಿರುವನು. ಸುತ್ತಣ

ಸಣ್ಣ ಪಾಳೆಯಗಾರರ ರಾಜ್ಯವನ್ನು ಒತ್ತಿ ಬರುವೆನೆಂದು ಹೇಳಿಕೊಳ್ಳುತ್ತಿರುವನು. ಅವನನ್ನು ಮುತ್ತಿ ಕೈಸೆರೆ ಹಿಡಿಯುತ್ತೇನೆ," ಎಂದು ತನ್ನ ಮಂತ್ರಿ ಮಾನ್ಯರ ಸಂಗಡ ಹೀಗೆ ಮಾರಭೂಪನು ಹೇಳಿದ ಸುದ್ದಿಯನ್ನು ಬೇಹುಗಾರರಿಂದ ರಾಮನಾಥನು ತಿಳಿದವನಾದನು; ಮಂತ್ರಿ ಬೈಚಪ್ಪನೊಡನೆ ಆಲೋಚಿಸಿ ಹುಳಿಯಾರಿಗೆ ಕೂಡಲೇ ಹೋಗಿ ಮುತ್ತಿಗೆ ಹಾಕಬೇಕೆಂದು ನಿರ್ಧರಿಸಿದನು.

'ಹುಳಿಯಾರು ಮಾರಿ ಗೊಂಡನ ಗಂಡನ ಗಂಡ'ನೆಂಬ ಬಿರುದನ್ನು ಧರಿಸಿ ಬೊಲ್ಲನನ್ನು ಏರಿ ತನ್ನ ಎಪ್ಪತ್ತೇಳು ಮಾನ್ಯೆಯರೊಡನೆ ಹೊರ ಪ್ರಯಾಣ ಮಾಡಿ ದಾರಿ ಹಿಡಿದು ತೆರಳಿದನು. ಗಂಡಿ ಬಾಗಿಲು, ಕೂಡಲಿಗೆ, ಕಣಜನ ಹಳ್ಳಿ, ಬೂದಿಯಾನ ಹಳ್ಳಿ, ಮತ್ತು ಎಲ್ಲೋಡು ಮುಂತಾದ ಸ್ಥಳಗಳಲ್ಲಿ ಬೀಡು ಬಿಡುತ್ತಾ ಪ್ರಯಾಣ ಮಾಡಿ ಹುಳಿಯಾರಿನ ನಂದನವನದಲ್ಲಿ ಬಂದಿಳಿದನು.

ಈ ಸಂಗತಿಯನ್ನು ಮಾರಿಗೊಂಡನು ತಿಳಿದ ಕೂಡಲೇ ಸಂತುಷ್ಟನಾಗಿ ಸುತ್ತಣ ಮಾನ್ಯೆಯರನ್ನೆಲ್ಲಾ ಕರಸಿ ಹೊಸಮಲೆಯನ್ನು ಆಳುತ್ತಿರುವ ಕಂಪಿಲ ಭೂಪಾಲನ ಕುಮಾರ ರಾಮನಾಥನು ಪಲ್ಲಕ್ಕಿಯಲ್ಲಿ ಕುಳಿತು ಬಂದಿರುವನು ಅವನನ್ನು ಎದುರಿಸುವವರು ಬನ್ನಿ ಎಂದು ಎಕ್ಕಟಿಗರನ್ನು ಕಳುಹಿಸಿದನು. ಹಿರಿಯೂರಿನ ಅರಸನೂ, ಬಾಗೂರು ಕಟ್ಟೆಯ ನಾಯಕನೂ ಮತ್ತು ಸಣ್ಣಕ್ಕಿ ಬಾಗೂರು ನಾಯಕನೂ ತಮ್ಮ ತಮ್ಮ ಸೈನ್ಯದೊಡನೆ ಬಂದು ಹುಳಿಯಾರು ಸೇರಿದರು. ಮಾರಗೊಂಡನು ಎಲ್ಲರಿಗೂ ವೀಳಯವನ್ನು ಕೊಡುವಾಗ ಅಸಗೋಡು ನಾಯಕ, ಬಾಗೂರು ಓಬಯ್ಯ, ಬಾಗೂರು ತಿಪ್ಪರಾಜು ಪಾಲ, ಮನ್ನೂರ ಮಾರ, ಕಂಪಿಲಿಯ ಸೋಮ, ಹೊನ್ನೂರ ವಿರುಪಯ್ಯ, ನಡಗೂರ ಬಸವ, ಬಸವಾಪುರದ ಬೊಮ್ಮಲಿಂಗ, ಕಾವಲಿ ಗಿರಿಯ ಸಾವಾನೆ ಸಿದ್ದ, ಮರುಡಿಯ ಚನ್ನ ಸೋಮ, ಚನ್ನಮಲ್ಲಯ್ಯ, ಕನ್ನ, ಭೂಟಾಕ ಚಿನ್ನ, ಮರಳೀಯ ಪಾಪಯ್ಯ, ಮೀನಿಗರ ಲಕ್ಕ ಮತ್ತು ಮುದ್ದು ಬಸವಯ್ಯ, ಮುಂತಾದ ವೀರರು ಒಬ್ಬರನೊಬ್ಬರು ಮೂದಲಿಸುತ್ತ ತಮ್ಮ ತಮ್ಮಲ್ಲಿಯೇ ವಾದಿಸುತ್ತ ವೀಳಯವನ್ನು ಹಿಡಿದರು.

ಮಾರಭೂಪನ ಭಟರು ಕುಮಾರ ರಾಮನ ಭಟರ ಮೇಲೆ ಬಿದ್ದರು. ರಾಮನ ಪರಿವಾರದ ನಾಯಕರು ಶತ್ರುಗಳನ್ನು ಇರಿದು ರಾವುತರನ್ನು ಕೆಡಹಿ

ದರು. ಮುಂದಿಟ್ಟ ಕಾಲನ್ನು ಹಿಂದಕ್ಕೆ ತೆಗೆಯದೆ ಶತ್ರುಗಳನ್ನು ಸಂಧಿಸಿ ಹುಳಿಯಾರಿನ ಮಾರ್ಬಲವನ್ನು ಒಂದೂ ಉಳಿಯದಂತೆ ಇರಿದು ತರಿದು ಒಟ್ಟಿದರು. ಮುರಿದು ಬರುತ್ತಿದ್ದ ತನ್ನ ಬಲವನ್ನು ಸಂತೈಸಿ ಮಾರಭೂಪನೇ ಮುನ್ನೂರು ಎಕ್ಕಟಗರೊಂದಿಗೆ ರಂಣರಂಗವನ್ನು ಹೊಕ್ಕನು ಮುರಿದ ಬಲವು ಮತ್ತೆ ತಿರುಗಿ ಬರುತ್ತಿರುವುದನ್ನು ಕಂಡು ರಾಮನಾಥನ ಚರರು ರಣರಂಗದಲ್ಲಿ ಶತ್ರುಗಳ ಶಿರವನ್ನು ಕತ್ತರಿಸಿ ತರಿದಾಡಿದರು.

ಐದು ಬಿಂದಿಗೆ ಹೊನ್ನು ಮತ್ತು ಹೊನ್ನಿನ ಅರಗಿಳಿ ಇವುಗಳನ್ನು ಕಪ್ಪವಾಗಿ ಕೊಟ್ಟ ಹೊರತು ತಾನು ಮುತ್ತಿಗೆಯನ್ನು ಎಬ್ಬಿಸುವುದಿಲ್ಲವೆಂದು ಹೇಳುತ್ತ, ರಾಮನ ಜೀರು ಮುತ್ತಿಗೆಯನ್ನು ಹಾಕಿ ಆರು ಸಾವಿರ ಬಲದೊಡನೆ ತಾನೊಂದು ಕಡೆ ಮುತ್ತಿದನು. ಇನ್ನೊಂದು ಕಡೆ ಹುಲಿ ಮುಖವನು ಹಿಡಿದು ಮೂರು ಸಾವಿರ ಬಲವು ಸೇರಿತು. ಮತ್ತೊಂದು ಕಡೆ ಕುದುರೆಯ ರಾವುತರನ್ನು ನಿಲ್ಲಿಸಿದನು.

ತನ್ನ ಮಾನ್ಯೆಯರನ್ನು ಮಗದೊಂದು ಕಡೆ ಕೂಡಿಕೊಂಡು ತಾವು ಕದನ ಕೋವಿದರೂ, ದೊರೆಯ ಮಕ್ಕಳೂ ಎಂದು ಹೇಳಿ ಕೊಳ್ಳುತ್ತಾ ಮುತ್ತಿನ ಸತ್ತಿಗೆಯ ನೆಳಲಲ್ಲಿ ರಾಮನಾಥನು ತನ್ನ ಸೈನಿಕರಿಗೆ ಚಿನ್ನದ ನಾಣ್ಯಗಳನ್ನು ಹಂಚುತ್ತಿದ್ದನು.

ಹುಳಿಯಾರ ಮಾರಗೊಂಡನ ಗಂಡನೆಂಬ ಬಿರುದನ್ನು ರಾಮನು ಹೊಗಳಿಸಿ ಕೊಳ್ಳುತ್ತಿರುವಲ್ಲಿ ಕೊಳಲು, ತಮ್ಮಟೆ, ಚಿನ್ನಗಹಳೆಗಳು ಮೊಳಗಿದವು. ಭಟರು ಹೊಗಳುತ್ತಿದ್ದ ಬಿರುದನ್ನು ಕೇಳುತ್ತಾ ಮಾರ ಭೂಪಾಲನು ಅತಿಯಾಗಿ ನೊಂದವನಾಗಿ ತನ್ನ ಮಂತ್ರಿ ಕಲ್ಲರಸನನ್ನು ಕರೆಸಿ ಮುಂದಿನ ರಾಜ ಕಾರ್ಯಕ್ಕೆ ಸಲಹೆಯನ್ನು ಕೇಳಿದನು.

“ನಮ್ಮ ಸೈನ್ಯವು ಕುಗ್ಗಿ ಹೋಯಿತು. ನಾಳೆಯೊಳಗೆ ನಮ್ಮ ಕೋಟೆಯನ್ನು ರಾಮನು ಕೆಡವಿಸುವನು. ನಮ್ಮ ರಾಜ್ಯದ ಬಲವೆಲ್ಲ ರಣದಲ್ಲಿ ಅಳಿಯಿತು. ಹೊಣಕೆಯ ಭಂಟರೆಲ್ಲರೂ ಅಳಿದು ಹೋದರು ಅವನನ್ನು ಕೆಣಕಿ ನಾವು ಬದುಕುವ ರೀತಿಯು ನನಗೆ ತೋರದು. ರಾಮನು ಓರಗಲ್ಲನ್ನು ಗೆದ್ದನು. ಗುತ್ತಿಯ ಜಗದಪ್ಪ ರಾಯನನ್ನು ಸೋಲಿಸಿ ಅವನ ಮಗಳನ್ನು ಮದುವೆಯಾದನು. ದಿಳ್ಳಿಯ ಸುರತ್ರಾಣನ ಹಾವುಗೆಗಳನ್ನು ಮೆಟ್ಟಿದನು. ಎಲ್ಲ ರಾಯರ ಸೀಮೆಯನ್ನು ಒಳ ಹೊಕ್ಕು ತನ್ನ ರಾಜ್ಯವನ್ನು ವಿಸ್ತರಿಸಿದನು

ನಮಗೆ ಅವನೊಡನೆ ಕದನವು ಸಲ್ಲದು. ನಾವು ಬೇಗ ಅವನಿಗೆ ಪೊಗದಿಯನ್ನು ಕೊಟ್ಟು ಕಳುಹಿಸುವುದೇ ಲೇಸು ಇದರ ಮೇಲೆ ತಮ್ಮ ಚಿತ್ತ. ತಮ್ಮ ಅಪ್ಪಣೆಯಂತೆ ನಾನು ನಡೆಯಲು ಸಿದ್ಧನಿದ್ದೇನೆ," ಎಂದು ಮಂತ್ರಿಯು ನುಡಿದನು.

ಮಂತ್ರಿಯ ಮಾತನ್ನು ಕೇಳಿ ನಮ್ಮ ಬಲವು ಮುರಿದು ಹೋಯಿತು. ಶತ್ರುಗಳೊಡನೆ ಕಾದುವವರು ಊರಲ್ಲಿ ಯಾರೂ ಇಲ್ಲ. ಇನ್ನೇನು ಉಪಾಯವು ತಿಳಿಯದು ಎಂದು ಕೊಂಡು ಮಾರಗೊಂಡನು ರಾಮನೊಡನೆ ಒಪ್ಪಂದ ಮಾಡಿಕೊಂಡನು. ಬಿಂದಿಗೆ ಹೊನ್ನು ಐದು ಊರುಗಳು ಮತ್ತು ಹೊನ್ನಿನರಗಿಳಿ ಇವುಗಳ ಕಪ್ಪವೀಯಲು ಕುಮಾರ ರಾಮನು ಮುತ್ತಿಗೆಯನ್ನು ಎಬ್ಬಿಸಿ ಕಣಜದ ಹಳ್ಳಿಗೆ ತಿರುಗಿದನು.

ಕಂಪಿಲರಾಯನು, ಎಲ್ಲೆಲ್ಲಿಯೂ ವಿಜಯಿಯಾಗುತ್ತಿರುವ ತನ್ನ ಮಗನು ಯುದ್ಧ ಮಾಡುವ ರೀತಿಯನ್ನು ನೋಡಬೇಕೆಂದು ತನ್ನ ಮಂತ್ರಿ ಬೈಚಪ್ಪನ ಸಂಗಡ ಕರೆದು ಕೊಂಡು ಹುಳಿಯಾರು ಮಾರ್ಗವಾಗಿ ಬರುತ್ತಿದ್ದನು. ಈ ವರ್ತಮಾನವನ್ನು ಕೇಳಿ ಅಷ್ಟರಲ್ಲಿಯೇ ಜಯವನ್ನು ಪಡೆದು ಹಿಂತಿರುಗಿ ಬರುತ್ತಿದ್ದ ರಾಮನು ಹುಳಿಯಾರಿನ ರಾಜನಿಂದ ಕಪ್ಪವನ್ನು ಹೊಂದಿ ಬೊಲ್ಲನ್ನು ಏರಿ ತಂದೆಯ ಎದುರಿಗೆ ಬಂದನು. ತಂದೆಗೆ ವಂದಿಸಿ ಕಪ್ಪವನ್ನೂ, ಹೊನ್ನಿನರಗಿಳಿಯನ್ನೂ ತಂದೊಪ್ಪಿಸಿದನು. ಸಂತೋಷಭರಿತನಾದ ರಾಯನು ಕಂದ ರಾಮಯ್ಯನನ್ನು ತಬ್ಬಿ ಕೊಂಡನು. ಹಿಂದಿರುಗಿ ಬಂದು ದುರ್ಗದ ರಾಜಬೀದಿಯಲ್ಲಿ ಜಯ ಕಹಳೆಯನ್ನಿರಿಸಿ ಬರುತ್ತಿರುವಾಗ ಹರಿಯಮ್ಮನು ಬೀದಿಗೆ ಬಂದು ಈ ದೃಶ್ಯವನ್ನು ನೋಡಿ ಸಂತೋಷಿಸಿದಳು. ತಂಗಿ ಶಿಂಗಮ್ಮನು ಅಣ್ಣನ ಪಾದಕ್ಕೆರಗಿದಳು. ಸಹೋದರಿಯರೀರ್ವರೂ ರಾಮನಿಗೆ ಆರತಿಯನ್ನೆತ್ತಿದರು.

ರಾಮನು ಅರಮನೆಯನ್ನು ಸೇರಿ ತನ್ನೊಡನೆ ಬಂದಿದ್ದ ಮಾನ್ಯರೊಡನೆ ಹಿತನುಡಿಗಳಾಡಿ ಅವರನ್ನು ಕಳುಹಿಸಿ ತನ್ನ ಸತಿ ರಾಮಲಾದೇವಿಯೊಡನೆ ಅಂತಃಪುರವನ್ನು ಹೊಕ್ಕನು.

# ೧೦

ಇತ್ತಲಾಗಿ ದೆಹಲಿ ನಗರದಲ್ಲಿ ಬಾದೂರ ಖಾನನೆಂಬುವನು ತನ್ನ ಸುಲ್ತಾನನಿಗೆ ಮಾಡಬಾರದೊಂದು ತಪ್ಪನ್ನು ಮಾಡಿ ಸುಲ್ತಾನನ ಕೋಪಕ್ಕೆ ಹೆದರಿ ನಗರವನ್ನು ಬಿಟ್ಟು ನೆಚ್ಚಿನ ರಾವುತರೊಡನೆ ದಕ್ಷಿಣದೇಶಕ್ಕೆ ಪ್ರಯಾಣ ಮಾಡಿದನು.

"ನನ್ನನ್ನು ವೈ ಹಾಕಿಕೊಂಡು ಸುಲ್ತಾನನ್ನು ಎದುರಿಸುವವರು ಯಾರನ್ನೂ ಕಾಣೆನು. ಆದರೆ ಸುಲ್ತಾನನ ಹಾವುಗೆಗಳನ್ನು ಮೆಟ್ಟಿದ ಬಿರುದಾಂಕನಾದ ರಾಮನಾಥನು ಮಾತ್ರ ನನ್ನನ್ನು ಸಲಹಬಹುದು. ನಾನು ಅಲ್ಲಿಗೆ ಹೋಗುವೆನು," ಎಂದುಕೊಂಡು ಕುದುರೆಯನ್ನೇರಿ ಪ್ರಯಾಣ ಮಾಡಿ ಒಂದೇ ರಾತ್ರಿಯಲ್ಲಿ ಹತ್ತು ಗಾವುದ ನಡೆದರು. ಹೊಳೆಯ ದಡದಲ್ಲಿ ಇಳಿದು ಬುತ್ತಿಯನ್ನುಂಡು, ಮುಂದಕ್ಕೆ ಸಾಗಿದರು. ಈ ರೀತಿ ಪ್ರಯಾಣ ಮಾಡುತ್ತಾ ಹತ್ತು ದಿವಸಗಳಲ್ಲಿ ನರ್ಮದಾ ತೀರವನ್ನು ದಾಟಿದರು.

ಬಾದೂರನು ಮುಂಗಲಿರಾಯನ ಸೀಮೆಯನ್ನು ಸೇರಿ, ರಾಜನ ಸಹಾಯವನ್ನು ಕೋರಿದನು. ಬಾದೂರನು ದಿಲ್ಲಿಯನ್ನು ಬಿಟ್ಟು ಬಂದ ಸುದ್ದಿಯನ್ನೆಲ್ಲಾ ಮುಂಗಲಿರಾಯನು ಅವನಿಂದ ತಿಳಿದವನಾಗಿ ತನ್ನ ಮೇಲೆ ಸುಲ್ತಾನನ ಸೇನಾಧಿಕಾರಿ ನೇಮಿಖಾನನಿಗೆ ಸಂಶಯಬಾರದಂತೆ ಬಾದೂರನಿಗೆ ಮುಂದಿನ ಖರ್ಚಿಗಾಗಿ ಸ್ವಲ್ಪ ಹಣವನ್ನು ಕೊಟ್ಟು 'ರಚ್ಚೆ ಮಾಡದೆ ನಿಮ್ಮಿಚ್ಛೆ ಬಂದಂತೆ ಮುಂದಕ್ಕೆ ನಡೆಯುವುದು' ಎಂದು ತಿಳಿಸಿಬಿಟ್ಟನು.

ಮುಂದಕ್ಕೆ ಸಾಗಿ ಬಾದೂರನು ಓರಗಲ್ಲಿಗೆ ಹೋಗಿ ವೀರಪ್ರತಾಪನ ಸಹಾಯವನ್ನು ಕೇಳಿದನು. ಆದರೆ ರಾಜನು

"ನನ್ನಿಂದ ಸಹಾಯ ಕೊಡಲಾಗುವುದಿಲ್ಲ. ನೇಮಿ ಖಾನನು ಇಲ್ಲಿಗೆ ಬಂದು ನಿನ್ನನ್ನು ಹಿಡಿದು ಕೊಡಬೇಕೆಂದು ಕೇಳಿದರೆ ಅವನೊಡನೆ ಸೆಣಸುವುದು ನನ್ನಿಂದ ಸಾಧ್ಯವಿಲ್ಲ" ಎಂದು ಹೇಳಿ ವೀಳ್ಯವನ್ನು ಕೊಟ್ಟು ಮುಂದಕ್ಕೆ ಸಾಗಿಸಿದನು.

ಬಾದೂರನು ಮುಂದಕ್ಕೆ ಪ್ರಯಾಣ ಮಾಡುತ್ತಾ ಗುತ್ತಿಯ ಜಗದಪ್ಪ ರಾಯನಹತ್ತಿರಬಂದು ಅವನ ಸಹಾಯವನ್ನೂ ಪ್ರಾರ್ಥಿಸಿದನು. ಜಗದಪ್ಪನೂ "ನನ್ನಿಂದ ಇದು ಸಾಧ್ಯವಿಲ್ಲ ಕಂಪಿಲರಾಯನ ಮಗನಾದ ರಾಮನು ವಿಶೇಷವಾದ ಬಿರುದುಗಳನ್ನು ಧರಿಸಿರುವನು. ನೀವು ಅಲ್ಲಿಗೆ ಹೋಗಿರಿ," ಎಂದು ತಾಂಬೂಲವನ್ನು ಕೊಟ್ಟು ಮುಂದಕ್ಕೆ ಕಳುಹಿಸಿದನು.

ಬಾದೂರನು ಪ್ರಯಾಣಮಾಡಿ ಹೆದರಿದ ಹುಲ್ಲೆಯಂತೆ ಕುಮ್ಮಟದುರ್ಗ ವನ್ನು ಸೇರಿ ಕುಮಾರ ರಾಮನ ಸಮಯನ್ನು ಕಾದಿದ್ದು ಆತನಿಗೆ ಕಾಣಿಸಿ ಕೊಂಡನು.

ರಾಮನ ಪ್ರಶ್ನೆಗೆ, "ಸುಲ್ತಾನನ ಕೋಪಕ್ಕೆ ಪಾತ್ರನಾಗಿ ದಿಲ್ಲಿಯ ನಗರವನ್ನು ಬಿಟ್ಟು ನಾನಾ ರಾಜ್ಯಗಳನ್ನು ತಿರುಗಿ ಇಲ್ಲಿಗೆ ಬಂದಿರುವೆನು. ನನ್ನನ್ನು ಕಾಪಾಡುವಷ್ಟು ಧೈರ್ಯವುಳ್ಳವರನ್ನು ಯಾರನ್ನೂ ಕಾಣಲಿಲ್ಲ. ನಿನಗೆ ಶರಣು ಬಂದಿರುವೆನು. ಅವರೆಲ್ಲರೂ ನಿನ್ನನ್ನೇ ತೋರಿಸಿ ನಿನ್ನ ಬಳಿಗೆ ಕಳುಹಿಸಿರುವರು," ಎಂದು ನುಡಿದು ಬಾದೂರನು ರಾಮನಾಥನಿಗೆ ಕೈ ಮುಗಿದು ಅವನ ಮರೆ ಹೊಕ್ಕನು.

"ಮರೆ ಹೊಕ್ಕವರನ್ನು ಭೇದವಿಲ್ಲದೆ ಕಾಪಾಡುವವರಿಗೆ ಕೀರ್ತಿ ಯುಂಟು," ಎಂದು ಹೇಳಿ ರಾಮನಾಥನು, ಮರೆಹೊಕ್ಕ ಖಾನರನ್ನು ಬಿಟ್ಟು ಕೊಡುವುದಿಲ್ಲವೆಂಬ ಬಿರುದನ್ನು ಕೈಯೊಳಗೆ ಧರಿಸಿದನು.

ಬಾದೂರನಿಗೆ ಒಂದು ಗ್ರಾಮವನ್ನು ಉಮ್ಮಳಿಯಾಗಿ ಕೊಟ್ಟು ಉಡುಗೊರೆಯನ್ನಿತ್ತು ಅವರ ವಾಸಕ್ಕೆ ಐದು ಮನೆಗಳನ್ನು ಕೊಟ್ಟು ವರ್ಷದ ಖರ್ಚಿಗಾಗಿ ಮುನ್ನೂರು ವರಹಗಳನ್ನು ಕೊಡುತ್ತಾ ತನ್ನ ಬಳಿಯಲ್ಲಿಯೇ ನಿಲ್ಲಿಸಿಕೊಂಡನು.

ಬಾದೂರುಖಾನನು ನಡು ರಾತ್ರಿಯಲ್ಲಿ ದಿಲ್ಲೀ ನಗರವನ್ನು ಬಿಟ್ಟೋ ಡಿದ ಸಂಗತಿಯನ್ನು ತಿಳಿದು ನೇಮೀ ಖಾನನನ್ನು ಸುಲ್ತಾನನು ಕರೆಸಿದನು. ಮೋಸದಿಂದ ಓಡಿಹೋದ ಬಾದೂರನನ್ನು ಎಲ್ಲಿದ್ದರೂ ಬಂಧಿಸಿ ಎಳ ತರಿಸಿ. ಅವನ ಚರ್ಮವನ್ನು ಸುಲಿಸಿ ದಿಲ್ಲೀ ಪಟ್ಟಣಕ್ಕೆ ಬಲಿಯಾಗಿ ಕೊಡಿ"ಎಂದು ನೇಮಿಗೆ ಅಪ್ಪಣೆ ಇತ್ತನು. ನೇಮೀಖಾನನು ಚಾರರನ್ನು ಕರೆಸಿ, ನೀವು ಚಪ್ಪನ್ನ ದೇಶದೊಳಗೆ ಜೋಗಿ ವೇಷ ಹಾಕಿಕೊಂಡು ಹೋಗಿ, ಅವನ ನೆಲೆಯನ್ನು ಕಂಡು ಹಿಡಿದು ಬನ್ನಿ" ಎಂದು ಮಾಡಿದ ಅಪ್ಪಣೆಯಂತೆ

ಚಾರರು ದೇಶ ದೇಶವನ್ನು ತಿರುಗುತ್ತಾ ಕರ್ಣಾಟಕದ ಜಗದಪ್ಪನ ಪುರಕ್ಕೆ ಬಂದು ಬಾದೂರನು ಕುಮ್ಮಟದುರ್ಗದಲ್ಲಿ ಕುಮಾರ ರಾಮನೊಡನೆ ಇರುವ ಸಂಗತಿಯನ್ನು ತಿಳಿದು ಹಿಂದಕ್ಕೆ ಹೋಗಿ ಸುಲ್ತಾನನಿಗೆ ಈ ಸಂಗತಿಯನ್ನು ಅರುಹಿದರು-

ಸುಲ್ತಾನನು ನೇಮಿಯನ್ನು ಕರೆಸಿ ಖಾನರೊಡನೆ ಕುಮ್ಮಟ ದುರ್ಗಕ್ಕೆ ಹೋಗಿ ಬಾದೂರನನ್ನು ಹಿಡಿದು ತರಬೇಕೆಂದು ಅಪ್ಪಣೆ ಮಾಡಿದನು.

ಈ ವಿಷಯವನ್ನು ತಿಳಿದ ಸುಲ್ತಾನನ ಕುಮಾರಿ ಬಾಬಮ್ಮನು ಕುಮಾರ ರಾಮನನ್ನು ಜೀವ ಸಹಿತ ಹಿಡಿದು ತರುವಂತೆ ತಂದೆಯನ್ನು ಪ್ರಾರ್ಥಿಸಿದಳು. ಮಗಳ ಕೋರಿಕೆಯನ್ನು ಈಡೇರಿಸುವಂತೆ ಸುಲ್ತಾನನು ನೇಮೀ ಖಾನನಿಗೆ ಕಟ್ಟಪ್ಪಣೆ ಮಾಡಿದನು.

ನೇಮಿಯು ತನ್ನೊಡನೆ ಬರತಕ್ಕ ಎಲ್ಲ ಸರದಾರರನ್ನೂ ಕೂಡಿಕೊಂಡು ದಿಲ್ಲಿಯನ್ನು ಬಿಟ್ಟು ಕುಮ್ಮಟದತ್ತ ಪ್ರಯಾಣ ಮಾಡಿದನು.

ಅಂಬಾರಖಾನ್, ತುಂಬರಖಾನ, ಅಬ್ದುಲ್ಲಾ ಖಾನ, ಶಂಬರ ಖಾನ, ಅಲ್ಲಿಯಖಾನ, ಸೈದಲ್ಲಿಖಾನ, ಮಹಮುದ್‌ಖಾನ, ಬಿಜ್ಜರಿಖಾನ, ಗುಜ್ಜರ ಖಾನ, ಮೀರಲ್ಲಿ, ರಾಜಾಖಾನ, ಮಹಮ್ಮದ್, ಕರೀಂಖಾನ, ಮುಂತಾದ ವಜೀರರು ನೇಮಿಯೊಡನೆ ಹೊರಟರು.

ಐದು ಲಕ್ಷ ಕಾಲು ಬಲ, ಮತ್ತು ಒಂದು ಲಕ್ಷ ರಾವುತರ ಸಂಗಡ ಹೊರಟು ಕುಮ್ಮಟ ದುರ್ಗವನ್ನು ಮುತ್ತಿ ಲಗ್ಗೆ ಮಾಡಿ ರಾಮನನ್ನು ಹಿಡಿದು ತರುವೆನು ಎಂದು ಹೇಳಿಕೊಳ್ಳುತ್ತಾ ಮಾರ್ಗದಲ್ಲಿ ದೊರೆತ ಯುದ್ಧ ಸಾಮಗ್ರಿಗಳನ್ನೆಲ್ಲಾ ಸೇರಿಸಿಕೊಂಡು ಕೂಚು ಮೇಲೆ ಕೂಚು ಮಾಡುತ್ತಾ ಭಾಗೀರಥಿಯನ್ನು ದಾಟಿ ಮುಂದಕ್ಕೆ ಸಾಗಿದರು. ಧನಂಜಯ ಪಟ್ಟಣ, ಚಿತ್ರಕೂಟ ಮುಂತಾದ ಪಟ್ಟಣಗಳನ್ನು ಸೇರುತ್ತಾ ಮುಂದಕ್ಕೆ ನಡೆದು ನರ್ಮದಾ ನದಿಯನ್ನು ದಾಟಿದರು. ಅನಂತರ ಔರಂಗಾಬಾದಿನ ಬಳಿಗೆ ಬಂದು ಸೇರಿದರು. ದಂಡೆಲ್ಲಾ ದಣಿದು ಬಂದು ಔರಂಗಾಬಾದಿನಲ್ಲಿ ಎಲ್ಲರೂ ಸೇರಿಕೊಂಡರು.

"ಇನ್ನು ನಮಗೆ ಸುಲ್ತಾನನ ಚಾಕರಿಯು ಸಾಕು. ಇಷ್ಟು ವೇಗವಾಗಿ ಪ್ರಯಾಣ ಮಾಡುವ ಅವಶ್ಯಕತೆಯೇ ಇರುವುದಿಲ್ಲ. ರಾಮನು ನಮ್ಮನ್ನು ನೋಡಿ ಅಂಜಿ ಹೋಗುವನೇ? ನಮ್ಮೆಲ್ಲರ ಮೇಲೂ ಕಡಿದಾಡದೆ ಪಾಳಯವನ್ನು ಬಿಟ್ಟು ಎಂದಿಗೂ ಹೋಗುವುದಿಲ್ಲ. ಧಿಟ್ಟತನವು ಅವನಿಗೆ ಇಲ್ಲದಿದ್ದರೆ

ಸುಲ್ತಾನನ ಹಾವುಗೆಯನ್ನು ಮೆಟ್ಟುತ್ತಲೇ ಇರಲಿಲ್ಲ" ಎಂದು ಖಾನಖಾನರು ತಮ್ಮಲ್ಲಿಯೇ ಮಾತನಾಡಿಕೊಳ್ಳುತ್ತಾ ವಿಜಾಪುರಕ್ಕೆ ಬಂದಿಳಿದರು. ಅಲ್ಲಿ ದಂಡನ್ನೆಲ್ಲಾ ಇಳಿಸಿ ನೇಮಿಯು ಮುಖ್ಯರಾದ ವಜೀರರನ್ನು ಕರೆಸಿ ಅವರ ಆಲೋಚನೆಯನ್ನು ಕೇಳಿದನು. ಕೆಲವರು ಕೂಡಲೆ ದಂಡನ್ನು ನಡೆಸದಂತೆ ನಿಲ್ಲಿಸಬೇಕೆಂದರು. ಇಲ್ಲಿಯೇ ಕುಳಿತು ಚತುರೋಪಾಯಗಳನ್ನು ಮಾಡಿ ಕುಮ್ಮಟ ದುರ್ಗದಿಂದ ವರ್ತಮಾನವನ್ನು ತರಿಸಿಕೊಂಡು ರಾಮಯ್ಯನು ಶರಣಾಗತನಾಗದೇ ಹೋದರೆ ಮುಂದಿನಕಾರ್ಯವನ್ನು ಮಾಡುವುದು ಯುಕ್ತ ವೆಂದು ಬೇರೆ ಕೆಲವು ವಜೀರರು ಸಲಹೆ ಕೊಟ್ಟರು. ಇದು ಸೂಕ್ತ ಕಂಡುದ ರಿಂದ ನೇಮಿಯು ಕುಮ್ಮಟ ದುರ್ಗಕ್ಕೆ ವರ್ತಮಾನವನ್ನು ಕಳುಹಿಸಿದನು.

ಸುತ್ತಲಿನ ಸಣ್ಣ ಸಣ್ಣ ಪಾಳೆಯಗಾರರು ಎತ್ತಣ ಮಾರಿ ಬಂದಿತು ಎಂದು ಹೆದರಿ ನೇಮಿಖಾನನಿಗೆ ತಮ್ಮ ತಮ್ಮ ಮಂತ್ರಿಗಳೊಡನೆ ಕಪ್ಪವನ್ನು ಕೊಟ್ಟು ಕಳುಹಿಸಿದರು. ನೇಮಿಖಾನನು ಕಪ್ಪವನ್ನು ಸ್ವೀಕರಿಸಿ,

"ನಿಮ್ಮ ಮೇಲೆ ಕಾರ್ಯಮಾಡಲು ಬಂದಿರುವುದಿಲ್ಲ. ಕುಮ್ಮಟ ದುರ್ಗವನ್ನು ಮುತ್ತಿ ಹಮ್ಮಿನ ರಾಮನನ್ನು ಕೈಸೆರೆ ಹಿಡಿದು ಸುಲ್ತಾನನ. ಬಳಿಗೆ ತೆಗೆದುಕೊಂಡು ಹೋಗಲು ಬಂದಿರುವೆನು. ನೀವು ಹೆದರಬೇಡಿ ನೀವು ಕೊಡುವ ಪೊಗದಿಯನ್ನೂ ನಿಮ್ಮ ನಿಮ್ಮ ಭಾಗದ ಸೈನ್ಯವನ್ನು ಮಾತ್ರ ನಮ್ಮೊಡನೆ ಕಳುಹಿಸಿಕೊಡಿ" ಎಂದು ಸಮಾಧಾನ ಹೇಳಿ ಕಳುಹಿಸಿದನು.

ನೇಮಿಯು ಪವದೀಖಾನನೆಂಬ ಒಬ್ಬ ಸರದಾರನನ್ನು ಐದು ಜನ ಕುದುರೆಯವರೊಂದಿಗೆ ಕಂಪಿಲರಾಯನ ಆಸ್ಥಾನಕ್ಕೆ ಕಳುಹಿಸಿ ಕೊಟ್ಟನು. ಕುಮ್ಮಟ ದುರ್ಗಕ್ಕೆ ಬಂದು ಬಾಗಿಲು ಕಾಯುವ ಗೊಲ್ಲರ ಸಂಗಡ ರಾಯನಿಗೆ ವರ್ತಮಾನವನ್ನು ಕೊಟ್ಟ ಸರದಾರನನ್ನು ಕಂಪಿಲರಾಯನು ಸಭೆಗೆ ಕರೆಸಿಕೊಂಡನು. ಪವದಿಖಾನನು ಸಭೆಗೆ ಬಂದು ರಾಯನ ಮುಂದೆ ಈ ರೀತಿ ನುಡಿದನು,

"ಸುಲ್ತಾನನ ದಂಡು ನೇಮಿಯೊಡನೆ ಮಿರಜಿಯವರೆಗೆ ಬಂದಿರುತ್ತದೆ. ನೀವು ಕಪ್ಪವನ್ನು ಕೊಟ್ಟು ಬಾದೂರು ಖಾನನನ್ನು ಕಳುಹುವುದಾದರೆ ನೇಮಿ ಖಾನನು ಹೊರಟು ಹೋಗುವನು. ಇದಕ್ಕೆ ಬದಲಾಗಿ ಬಾದೂರನನ್ನು ಮರೆ ಹಾಕಿಕೊಂಡರೆ ನೇಮಿಯು ಕುಮ್ಮಟವನ್ನು ಮುತ್ತಿ ಬಾದೂರನನ್ನು ಸೆರೆಹಿಡಿದು ನಿಮ್ಮನ್ನು ಸದೆಬಡಿಯುವನು. ಇದು ಶತಸ್ಸಿದ್ಧವಾದ ಮಾತು."

ಈ ಮಾತನ್ನು ಕೇಳಿ ಕಂಪಿಲನು ರಾಮನ ಮುಖವನ್ನು ನೋಡಿದನು. ತಕ್ಷಣ ರಾಮನೆಂದನು,

"ನೇಮಿಗೆ ಈ ಬಿಗುವಿನ ಮಾತುಗಳೇತಕ್ಕೆ ? ದಂಡನ್ನು ತರಲಿ. ನನ್ನ ಕೈ ತೋರಿಸುವೆನು. 'ಮೊರೆಹೊಕ್ಕವರ ಸೆರೆಕೊಡುವ ರಾಯರ ಗಂಡ' ಎಂಬ ಬಿರುದನ್ನು ನನ್ನ ಕಾಲಲ್ಲಿ ಧರಿಸಿ ನಾನು ಎಂದಿಗೂ ಬಾದೂರನನ್ನು ಬಿಟ್ಟುಕೊಡುವವನಲ್ಲ." ಹಾಗೆ ಹೇಳಿ ಪವದಿಖಾನನನ್ನು ಹಿಂದಕ್ಕೆ ಕಳುಹಿಸಿದನು.

ರಾಮನು ಹೊರ ಚಾವಡಿಗೆ ಬಂದು ಮಾನ್ಯೆಯರನ್ನು ಕರೆಸಿಕೊಂಡು ಪವದೀಖಾನನು ತಂದ ಸುದ್ದಿಯನ್ನೂ ಅದಕ್ಕೆ ತಾನಿತ್ತ ಉತ್ತರವನ್ನೂ ತಿಳಿಸಿ,

"ಮರೆಹೊಕ್ಕ ಪೋರನನ್ನು ಕುರುಬನೂ ಬಿಟ್ಟುಕೊಡುವುದಿಲ್ಲ. ಹೀಗಿರುವಲ್ಲಿ ನನ್ನ ಮರೆಹೊಕ್ಕವನನ್ನು ನಾನು ಬಿಟ್ಟುಕೊಡುವೆನೇ," ಎಂದು ಹೇಳಿದನು. ತಂದೆಯಿಂದ ಒಂದು ಬಿಂದಿಗೆ ಹೊನ್ನು ತರಿಸಿ ಸೇರಿದ್ದ ಮಂದಿಗೆ ಹಂಚಿ ಸುತ್ತುಮುತ್ತಲಿನ ರಾಜ್ಯದಲ್ಲಿರುವ ಬೇಡರನ್ನೆಲ್ಲಾ ಕರೆಯಿಸುವಂತೆ ಏರ್ಪಾಟು ಮಾಡಿದನು. ನಾಡ ದಂಡು ಮತ್ತು ಪರಿವಾರವನ್ನೆಲ್ಲಾ ಕೂಡಿಸುವಂತೆ ಬೈಚಪ್ಪನಿಗೆ ತಿಳಿಸಿದನು. ಚಾ ರಾಮರಾಯನ ಮಕ್ಕಳ ಅಧೀನದಲ್ಲಿ ಆರು ಸಾವಿರ ಕುದುರೆಯ ಒಂದು ದಂಡನ್ನು ಏರ್ಪಡಿಸಿ ರಾಮನಾಥನು ಯುದ್ಧ ಸನ್ನದ್ಧನಾದನು.

ಅತ್ತಲಾಗಿ ನೇಮಿಖಾನನು ಪವದೀಖಾನನು ತಂದ ವರ್ತಮಾನವನ್ನು ಕೇಳಿ ಕೋಪವನ್ನು ತಾಳಿ ಕುಮ್ಮಟವನ್ನು ಧೂಳು ಕೋಟೆಯನ್ನಾಗಿ ಮಾಡುವೆನೆಂದು ಆರ್ಭಟಿಸಿ ದಂಡು ಮುಂದಕ್ಕೆ ನಡೆಯಲು ಸನ್ನೆಗಾಳೆಯವನ್ನು ಹಿಡಿಸಿದನು. ಎಂಭತ್ತು ಸಾವಿರ ಕುದುರೆಯ ವಜೀರರು ಕುಂಭಿನಿ ಬಿರಿಯುವಂತೆ ಸಂಭ್ರಮದಿಂದ ಸೇನೆಯ ಮುಂಭಾಗದಲ್ಲಿ ನಡೆದರು. ಕಂಪಿಲನ ರಾಜ್ಯವನ್ನು ಹೊಕ್ಕು ನಾಡಿನ ಪ್ರಜೆಗಳಿಗೆ ಉಪಟಳವನ್ನು ಕೊಡುತ್ತಾ ಮುಂದೆ ಹೋದರು. ಇದನ್ನು ರಾಮನ ಕಡೆಯ ಶಬರರು ಕಂಡು ಖಾನಖಾನರನ್ನೆಲ್ಲಾ ಕಡಿದೊಟ್ಟುತ್ತಾ ಎಡಬಲದಲ್ಲಿ ಬರುವ ಕುದುರೆ, ಖಾನರ ತಲೆಗಳನ್ನು ಕಡಿಯುತ್ತಾ ಮುಂದೆ ನಡೆದರು. ಶಬರರು ಕೂಗುತ್ತಾ ಬೊಬ್ಬಿಡುತ್ತಾ ರಾವುತರ ಮುಂದಲೆಗಳನ್ನು ಹಿಡಿದುಕೊಂಡು ತಲೆಗಳನ್ನು ಕತ್ತರಿಸಿ ಕುಮ್ಮಟಕ್ಕೆ ಬಂದು ಕುಮಾರ ರಾಮನಿಗೆ ಶತ್ರುಗಳ ತಲೆಗಳನ್ನು ಒಪ್ಪಿಸಿ

ದರು. ಮುಸಲ್ಮಾನರ ಸೈನ್ಯವು ಶಬರರ ಹೊಡೆತಗಳನ್ನು ತಾಳಲಾರದೆ ಮಿರಜಿಯ ಮುತ್ತಿಗೆಯನ್ನು ಎಬ್ಬಿಸಿ ತೊರೆಗಲ್ಲು ಬಾದಾಮಿಗಳ ಬಳಿ ಕೂಚ್ನು ಮಾಡಿದರು. ನರಗುಂದದ ಹೊಳೆಯನ್ನು ದಾಟಿ ಕುಮ್ಮಟ ದುರ್ಗವನ್ನು ಅರವತ್ತು ಸಾವಿರ ಕುದುರೆಯ ವಜೀರರು ಮುತ್ತಿದರು.

ನೇಮಿಖಾನನು ಕುಮ್ಮಟವನ್ನು ಮುತ್ತಿದನೆಂಬ ಸಂಗತಿಯನ್ನು ಜಗದಪ್ಪನು ಕೇಳಿ ಕಂಪಿಲರಾಯನಿಗೆ ತನ್ನ ಸಹಾಯ ಕಳುಹಿಸಿಕೊಡುವುದಾಗಿ ಚಾರರ ಮೂಲಕ ಹೇಳಿ ಕಳುಹಿಸಿದನು. ಚಾರರು ಓಡಿ ಬಂದು ಈ ಸಂಗತಿಯನ್ನು ಕಂಪಿಲರಾಯನಿಗೆ ಅರುಹಿದರು. ರಾಯನ ಬಳಿಯಲ್ಲಿಯೇ ಇದ್ದ ಕುಮಾರ ರಾಮನು ತಂದೆಯನ್ನು ಕುರಿತು ಹೇಳಿದನು,

"ಸುಲ್ತಾನನಿಗೆ ಕಪ್ಪವನ್ನು ಕೊಡುವಂತಹ ರಾಜರ ಸಹಾಯವು ನನಗೆ ಬೇಡ. ನೇಮಿಖಾನನೊಡನೆ ನಾನೊಬ್ಬನೇ ಕಾದುವೆನು. ನನ್ನ ಪಂಥವನ್ನು ನೋಡಲಿ." ಹಾಗೆ ಹೇಳಿ ಬಂದ ಚಾರರಿಗೆ ಉಡುಗೊರೆಯನ್ನು ಕೊಟ್ಟು ಅವರನ್ನು ಹಿಂದಕ್ಕೆ ಕಳುಹಿಸಿದನು.



ನೇಮಿಖಾನನ ದಂಡು ಕುಮ್ಮಟ ದುರ್ಗವನ್ನು ಎಂಟು ದಿಕ್ಕಿನಿಂದಲೂ ಮುತ್ತಿತು. ಯಾವ ದಿಕ್ಕಿನಿಂದ ನೋಡಿದರೂ ಖಾನನ ದಂಡೇ ಕಾಣಿಸುತ್ತಿತ್ತು. ಕಣಿವೆಗಳೂ, ಗುಡ್ಡಗಳೂ, ದುರ್ಗಗಳೂ ಖಾನನ ದಂಡಿನಿಂದ ತುಂಬಿಹೋದವು.

ಕುಮಾರ ರಾಮನು ಹೊರ ಚಾವಡಿಯನ್ನು ಹೊಕ್ಕು ನಗಾರಿಯನ್ನು 'ಢಂ ಢಮ ಢಮ' ಎಂದು ಹೊಡೆಸಿದನು. ರಾಮನು ಎಕ್ಕಟಿಗರನ್ನೂ ಬಿರುದಿನ ಮಾನ್ಯೆಯರನ್ನೂ ತನ್ನ ಮುಂದಿ ಬಲವನ್ನೂ ಕರೆಸಿ ಗಂಧ ಪರಿಮಳವನ್ನೂ ವೀಳೆಯವನ್ನೂ ಕೊಟ್ಟು ತುರುಕರ ದಂಡಿನ ಮೇಲೆ ಒಬ್ಬೊಬ್ಬರಾಗಿ ಬಿದ್ದು ಅವರನ್ನು ಸೋಲಿಸಿ ಬರಬೇಕೆಂದು ಕಟ್ಟಪ್ಪಣೆ ಮಾಡಿದನು. ಶೂರರಾದ ಅವರೆಲ್ಲರೂ ಮರಬಿಲ್ಲು, ಕತ್ತಿ, ಈಟಿ, ಬಾಣ, ಪೆಟ್ಟಲು, ಭರ್ಜಿ, ಕಠಾರಿ, ಕೈಯಂಬು ಮೊದಲಾದುವುಗಳನ್ನು ಧರಿಸಿದರು. ಆನೆ ಕುದುರೆ

ಗಳನ್ನು ಏರಿದರು. ಅರವತ್ತು ಸಾವಿರ ವೀರರು ಕುಮ್ಮಟ ನಗರದ ಅರಸನ ಕಾರ್ಯಕ್ಕಾಗಿ ನಾ ಮುಂದು, ತಾ ಮುಂದು ಎಂದು ಶತ್ರುಗಳ ಮೇಲೆ ಬೀಳಲು ಅನುವಾದರು. ಕುಮಾರ ರಾಮನು ಪ್ರತಿಯೊಬ್ಬ ಸರದಾರನನ್ನೂ ಕರೆದು ಅವರು ಮಾಡತಕ್ಕ ಕಾರ್ಯವನ್ನು ಅವರಿಗೆ ತಿಳಿಸುತ್ತಿದ್ದನು.

ಆರೆಯ ಚಾರಾಮರಾಯನ ಮಕ್ಕಳು ಆರು ಸಾವಿರ ಕುದುರೆ ರಾವುತ ರೊಂದಿಗೆ ಬೆಟ್ಟವನ್ನು ಸುತ್ತಿಕೊಂಡು ಹೋಗಿ ದಾರಿಯಲ್ಲಿ ಬರುತ್ತಿದ್ದ ಖಾನನ ದಂಡನ್ನು ಎದುರಿಸಿದರು. ಶತ್ರುಗಳ ದಂಡನ್ನು ಸೂರೆಮಾಡಿದರು. ಮುನ್ನೂರು ಕುದುರೆಗಳನ್ನೂ ಹನ್ನೊಂದು ಆನೆಗಳನ್ನೂ ಸೆರೆಹಿಡಿದು ತಂದು ಚನ್ನರಾಮಯ್ಯನಿಗೆ ಹರುಷದಿಂದ ಒಪ್ಪಿಸಿದರು. ಗಡಿಯಕಾವಲ ಕಾಟ ನಾಯ್ಕನು ಒಂದು ಸಾವಿರ ಮಂದಿಯೊಡನೆ ಕಡೆಯ ಕಲ್ಲನ್ನು ಹತ್ತಿ ಕಣಿವೆ ಯಲ್ಲಿ ಬರುತ್ತಿದ್ದ ಖಾನರನ್ನು ಭಿನ್ನವಿಲ್ಲದೆ ಕೊಂದು ಸಾಯಂಕಾಲದ ಹೊತ್ತಿಗೆ ನೂರು ಕುದುರೆಯನ್ನು ಹಿಡಿದು ತನ್ನ ಒಡೆಯ ರಾಮಯ್ಯನಿಗೆ ಒಪ್ಪಿಸಿ ಕೈಮುಗಿದನು.

ಗುಡ್ಡದ ಕಾವಲ ಹೊಲೆಯರ ಹೊನ್ನುಗನು ಕೋಡುಗಲ್ಲನ್ನು ಹತ್ತಿ ಅಲ್ಲಿಯ ಕಣಿವೆಯಿಂದ ಒಳಹೊಕ್ಕು ಬರುತ್ತಿದ್ದ ಖಾನನ ಕುದುರೆಯ ರಾವುತ ರನ್ನು ಕಣಿವೆಯೊಳಗೆ ಬಿಟ್ಟು ಸುತ್ತು ಹಾದಿಯಿಂದ ಬಂದು ಶತ್ರುಗಳನ್ನು ಸುತ್ತುಗಟ್ಟಿ ಬಳೆಯ ಹೇರನ್ನು ಬಡೆಯುವಂತೆ ಶತ್ರುಗಳ ತಲೆಯನ್ನು ಒಡೆದು ನೂರೊಂದು ಕುದುರೆಯನ್ನು ಹಿಡಿದು ತಂದು ರಾಮಯ್ಯನಿಗೊಪ್ಪಿಸಿದನು.

ಬೆಟ್ಟದ ಶಿಂಗನಾಯ್ಕನು ಹಿರಿಯ ಕಣಿವೆಯಲ್ಲಿ ಬರುತ್ತಿದ್ದ ದೊಡ್ಡ ಫೌಜನ್ನು ಮುತ್ತಿಕೊಂಡು ಅಂಬಿನ ಮಳೆಯನ್ನು ಸುರಿಸಿ ಸಾವಿರದೇಳುನೂರು ಮಂದಿಯನ್ನು ಕೊಂದು ಲೆಕ್ಕವಿಲ್ಲದಷ್ಟು ಜನರನ್ನು ಘಾಸಿ ಮಾಡಿದನು. ಹುಲಿಯ ಆರ್ಭಟಕ್ಕೆ ಹೆದರಿ ಓಡುವ ಆಕಳಿನ ಹಿಂಡಿನಂತೆ ತುರುಕರ ದಂಡಿ ನವರು ನೋವಿನಿಂದ ಹಿಂದಕ್ಕೆ ಓಡಿದರು. ಅವನು ಅರವತ್ತು ಕುದುರೆ ಯನ್ನು ಹಿಡಿದು ತಂದು ರಾಮಯ್ಯನಿಗೆ ಒಪ್ಪಿಸಿ ಕರಗಳನ್ನು ಮುಗಿದನು.

ಗುಜ್ಜಲ ಓಬನು ಹೊಳೆಯ ದಂಡೆಯಲ್ಲಿಯೇ ಬರುತ್ತಿದ್ದ ಖಾನನ ದಂಡನ್ನು ಕಡಿದೊಟ್ಟಿ ಇನ್ನೂರು ಕುದುರೆಗಳನ್ನು ಸೆರೆಹಿಡಿದನು.

ಎಮ್ಮೆ ಗುಡ್ಡದ ದಾರಿಯಲ್ಲಿ ಬರುತ್ತಿದ್ದ ಹೆಮ್ಮೆಯ ತುರುಕರನ್ನು ಅಡ

ಗಟ್ಟಿ ಅವರನ್ನು ದಣಿಸಿದರು. ಶತ್ರುಗಳು ದಾರಿಯನ್ನು ಕಾಣದೆ ಅಡವಿಬಿದ್ದು ಓಡಿಹೋದರು.

ಮುನ್ನಲ ಮಾದನು ಮುನ್ನೂರು ಬಿಲ್ಲು ಈಟಿಗಳನ್ನು ಶತ್ರುಗಳಿಂದ ಹಿಡಿದು ತಂದು ರಾಯನಿಗೆ ಒಪ್ಪಿಸಿದನು. ಒಕ್ಕಲಿಗರ ಮುದ್ದನು ಶತ್ರುಗಳ ಸೊಕ್ಕಿನ ಆನೆಯ ಹಿಂಡನ್ನು ಹೊಕ್ಕು ಅವುಗಳನ್ನು ಮುಂದಕ್ಕೆ ಬಿಡದೆ ಅವುಗಳನ್ನು ಕತ್ತಿಯಿಂದ ಕಡಿದು ಖಾನರನ್ನು ಹಿಂದಕ್ಕೆ ಅಟ್ಟಿ ನೂರು ಕುದುರೆಗಳನ್ನು ಹಿಡಿದು ತಂದನು.

ಮೀನಿಗರ ಲಕ್ಕ, ರಕ್ಕಸ ಮಾದ, ಬುಕ್ಕ, ಪಾಲ, ವಾದಿಗರ ಹಂಪ, ದ್ಯಾವ ಆದವಾನಿಯ ಗಿರಿಯ ಮುಂತಾದವರು; ಶತೃಶಿಬಿರವನ್ನು ಹೊಕ್ಕು ಅವರ ತಲೆಗಗಳನ್ನು ಕಡಿದ, ಚಂಡಾಡುವ ವಿನೋದವನ್ನು ಬಣ್ಣಿಸಲು ಅಸಾಧ್ಯವಾಗಿತ್ತು. ಇವರು ಮುನ್ನೂರು ಕುದುರೆ, ಮೂವತ್ತು ಆನೆ, ಹನ್ನೊಂದು ಮಂದಿ ಸರದಾರರುಗಳನ್ನು ಕೈಸೆರೆ ಹಿಡಿದು ತಂದು ರಾಮಯ್ಯನಿಗೆ ಒಪ್ಪಿಸಿದರು. ಇಷ್ಟು ಹೊತ್ತಿಗೆ ಕತ್ತಲಾಗಿ ಸಂಜೆಯಾದ್ದರಿಂದ ಸುತ್ತಲೂ ಹೋಗಿದ್ದ ಬೇಡರೆಲ್ಲರೂ ಹಿಂದಿರುಗಿ ಬಂದು ರಾಮಯ್ಯನಿಗೆ ವಂದಿಸಿದರು.

ಒಂದು ದಿನದ ಕಾಳಗವು ಪೂರೈಸಿತು. ಆದರೆ ನೇಮಿಖಾನನಿಗೆ ಈ ಒಂದು ದಿನದ ಬೇಡರ ಹಾವಳಿಯನ್ನು ತಡೆಯುವುದು ಅಸಾಧ್ಯವಾಯಿತು. ಎಲ್ಲಿ ನೋಡಿದರೂ ಬೇಡರು ನೇಮಿಯ ಸೈನ್ಯವನ್ನು ಮುತ್ತುತ್ತಿದ್ದರು. ಓಡಿಹೋಗೋಣವೆಂದರೆ ಎತ್ತನೋಡಿದರೂ ಕಲ್ಲು ಮುಳ್ಳಿನಭೂಮಿಯಾಗಿತ್ತು. ಹಿಂಭಾಗದಿಂದ ಬರುತ್ತಿದ್ದ ಬೇಡರು ಮುತ್ತಿ ಮಂದಿ ಮಕ್ಕಳನ್ನೂ, ಖಾನರನ್ನೂ ಕಡಿದು ಹಾಕುತ್ತಿದ್ದರು. ಇದನ್ನು ನೋಡಿ ನೇಮಿಯು ಮನನೊಂದವನಾಗಿ ಚಿಂತಿಸಿದನು.

"ಈ ದಿವಸ ನಮ್ಮ ಬಲವೆಲ್ಲ ನೊಂದಿತು. ರಾಮನ ಬಲವು ನಮ್ಮನ್ನು ಕುಮ್ಮಟ ದುರ್ಗಕ್ಕೆ ಹೋಗಿ ಮುತ್ತದಂತೆ ತಡೆದಿರುವುದು," ಎಂದು ಆಲೋಚಿಸಿ ತನ್ನ ಆಪ್ತರನ್ನು ಕರೆಸಿ ಅವರಿಗೆ ವೀಳೆಯವನ್ನು ಕೊಟ್ಟು ಈರೀತಿ ನುಡಿದನು,

"ನಾಳೆ ದಿವಸ ಕುಮ್ಮಟವನ್ನು ಮುತ್ತಬೇಕು. ಅಲ್ಲಿ ಕೂಚುಮಾಡಿ ಕೋಟೆಯನ್ನು ಹಿಡಿದು ಧೂಳುಮಾಡಬೇಕು" ಅವರಿಗೆ ಹಾಗೆ ಹೇಳಿ ಕಳುಹಿಸಿದ ಖಾನನು ಮುಂದಿನ ಕಾರ್ಯವನ್ನು ಯೋಚನೆಮಾಡುತ್ತಾ ಮಲಗಿದನು.

ಇತ್ತಲಾಗಿ ರಾಮಯ್ಯನು ಮಂದಿಮಕ್ಕಳನ್ನೆಲ್ಲಾ ಕರೆಸಿದನು. 'ನಾಳೆಯ ದಿವಸ ತುರುಕರು ನಮ್ಮ ಕೋಟೆಯನ್ನು ಮುತ್ತಲು ಬರುವರು. ನೀವೆಲ್ಲರೂ ಅವರು ಬರುವ ಕಣಿವೆದಾರಿಗಳನ್ನು ಅಡ್ಡ ಕಟ್ಟಿರಿ' ಎಂದು ಗಂಡುಗಲಿಗಳಾದ ತನ್ನವರಿಗೆ ತಿಳಿಸಿ ಓಲಗವನ್ನು ಮುಗಿಸಿ ತಂದೆಯ ಮನೆಗೆ ತೆರಳಿದನು. ತಂದೆಗೆ ವಂದಿಸಿ ಹಿಂದಿನ ದಿನ ತನ್ನ ಕಡೆಯವರು ನೇಮಿಯ ಬಲವನ್ನು ಘಾಸಿಗೊಳಿಸಿದ ವಿಷಯವನ್ನು ತಿಳಿಸಿ ಮಾರನೆಯ ದಿವಸ ಇನ್ನೂ ಬಲವಾದ ಕಾಳಗವು ನಡೆಯುವುದು ಎಂದು ಹೇಳಿದನು.

ಮಾರನೆಯದಿನ ರಾಮನಾಥನು ಕೋಳಿ ಕೂಗುವ ಮುನ್ನವೇ ಎದ್ದು ಚೊಕ್ಕ ಭೋಜನ ಮಾಡಿ ಕುದುರೆಯ ಲಾಯವನ್ನು ಹೊಕ್ಕು ಬೊಲ್ಲನನ್ನು ಪೂಜಿಸಿದನು. ಎಲ್ಲಾ ಕುದುರೆಗಳನ್ನು ಶೃಂಗರಿಸಬೇಕೆಂದು ಅಪ್ಪಣೆಮಾಡಿ, ತನ್ನ ಮಾನ್ಯೆಯರನ್ನು ಕೂಡಿಕೊಂಡು ಹೊನ್ನಂದಣವನ್ನೇರಿ ಹೊರ ಚಾವ ಡಿಗೆ ಬಂದನು. ಅನಂತರ ರಾಮಯ್ಯನು ಬೈಚಪ್ಪನ ಮಕ್ಕಳನ್ನೂ ದೇವಿ ಶೆಟ್ಟಿಯಲಿಂಗ, ಬೇವಿನ ಸಿಂಗಯ್ಯ, ತೋಟಗಾರ ದ್ಯಾವ, ಮಾವ ಮಂಚಣ್ಣನ ಮಕ್ಕಳು, ಬಾದೂರ ಖಾನ, ಬಾಣದ ಬಸವ, ಆದವಾನಿಯ ಅರಸು ಮಕ್ಕಳು, ಮಾದಾವಿ ಬಸವ ಮುಂತಾದವರನ್ನು ಕೂಡಿಕೊಂಡು ತೊರೆ ಮಾವಿನ ಹತ್ತಿರಕ್ಕೆ ಬಂದನು. ಮಾನ್ಯರಿಗೆಲ್ಲ ಒಂದೊಂದು ಕುದುರೆ ಯನ್ನು ಕೊಟ್ಟು ತಾನು ಬೊಲ್ಲನನ್ನು ಏರಿದನು.

ಅತ್ತಲಾಗಿ ನೇಮೀ ಖಾನನು, ಕುಮ್ಮಟ ದುರ್ಗಕ್ಕೆ ಮುತ್ತಿಗೆ ಹಾಕ ಬೇಕೆಂದು ಉತ್ತಮರಾದ ಖಾನರನ್ನು ಕರೆಸಿ ತಾನೂ ಸಹ ಸಭೆಯನ್ನು ಹೊಕ್ಕು ಕುಳಿತನು. ನೇಮೀಖಾನನೇ ಬಂದುದನ್ನು ನೋಡಿ ದಂಡಿನವರು ಹೆದರಿ ಎಚ್ಚೆತ್ತು ಯುದ್ಧಕ್ಕೆ ಹೊರಡಲು ಅನುವಾದರು. ಬೆಳಗಿನ ಜಾವ ದಲ್ಲಿಯೇ ಪ್ರಯಾಣಕ್ಕೆ ಬುತ್ತಿಯನ್ನು ಕಟ್ಟಿಕೊಂಡು ಬಗಲಲ್ಲಿ ರೊಟ್ಟಿಯ ಗಂಟನ್ನು ಇಟ್ಟುಕೊಂಡು ಯುದ್ಧಕ್ಕೆ ತೆರಳಿದನು. ದಾರಿಕಾರರು ದಾರಿ ಯನ್ನು ತೋರಿಸುತ್ತಾ ಮುಂದೆ ನಡೆದರು. ಧೀರರಾದ ಲಕ್ಷಾಂತರ ಮಂದಿಯ ಕಾಲುಬಲವೂ ಮುಂದೆನಡೆಯಿತು. ಕುದುರೆಯ ರಾವುತರೂ, ಆನೆಯದಳವೂ ಬಿಲ್ಲಿನ ಮಂದಿಯೂ, ಇವರನ್ನು ಹಿಂಬಾಲಿಸಿತು. ನೇಮಿಖಾನನು ತನ್ನ ಸರ ದಾರರೊಂದಿಗೆ ಆನೆಯನ್ನೇರಿ ಹೊರಟನು.

ಇವರನ್ನು ಅನುಸರಿಸಿ ಪಾಳೆಯಗಾರರು ನಡೆದರು. ಕೆಂಧೂಳಿಯು

ಆಕಾಶವನ್ನು ಮುತ್ತಿತು. ಕಹಳೆಯನ್ನು ಹಿಡಿಸುತ್ತಾ ಭೇರಿಯನ್ನು ಬಾರಿಸುತ್ತಾ ದಂಡು ಮುಂದಕ್ಕೆ ನಡೆಯಿತು. ನೊರಜು ಕೆಂಡದ ಕೊಂಡನ್ನು ಮುತ್ತುವಂತೆ ನೇಮೀ ಖಾನನ ದಂಡು ಕುಮ್ಮಟ ದುರ್ಗದ ಗಂಡಿಯನ್ನು ಹೊಕ್ಕಿತು. ಸುತ್ತಲೂ ಕಣಿವೆಗಳಲ್ಲಿ ಕಾದಿದ್ದ ರಾಮನಾಥನ ದಂಡು ಇದನ್ನು ನೋಡಿ, ಮಂಜು ಗುಡ್ಡಕ್ಕೆ ಮುಸುಕುವಂತೆ ಶತೃಗಳಮೇಲೆ ಬಿದ್ದು ಶತೃಗಳನ್ನು ಮುತ್ತಿಕೊಂಡಿತು. ಕತ್ತಿಯನ್ನು ಬೀಸುತ್ತಾ ಘರ್ಜಿಸಿ ರಾಮನ ಭಟರು ಶತೃಗಳನ್ನು ಕಡಿದೊಟ್ಟಿದರು. ಇದನ್ನು ಶತ್ರುಗಳು ತಾಳಲಾರದೆ ಬೆನ್ನು, ತೊಡೆ, ತೋಳು, ಕೈಕಾಲು ಮುರಿದುಕೊಂಡು ಉರುಳಿ ಬಿದ್ದರು. ಅನೇಕ ತಲೆಗಳು ನೆಲಕ್ಕೆ ಉರುಳಿದುವು. ಹೊಟ್ಟೆಯು ಒಡೆದು ಕರುಳು ಕುಪ್ಪೆ ಬಿದ್ದಿತು.

ರಂಗವು ಶವಮಯವಾಯಿತು. ಬಿಲ್ಲಿನವರು ಸರದಾರರನ್ನೆಲ್ಲಾ ಮುಸುಕಿ ಹೊಕ್ಕಿರಿದು ಕೊಲ್ಲುತ್ತಿದ್ದರು. ಕಲ್ಲುಕೋಟೆಯ ಚಿಕ್ಕ, ಕಾಮಗೇತಿಯ ತಿಮ್ಮ, ಬುಕ್ಕನಾಯಕ ಮೊದಲಾದವರು ಸರದಾರರನ್ನು ಬಾಣಗಳಿಂದ ಹೊಡೆದು ರವುಡೇ ಖಾನನನ್ನು ನೆಲಕ್ಕೆ ಕೆಡವಿದರು. ಇವನೊಡನೆ, ಇಪ್ಪತ್ತು ಸಾವಿರ ವಜೀರರು ರಕ್ತದಲ್ಲಿ ತೊಯ್ದು ನೆಲಕ್ಕೆ ಉರುಳಿದರು. ರವುಡೆ ಖಾನನು ನೆಲಕ್ಕೆ ಉರುಳಿದುದನ್ನು ನೋಡಿ ಎಲ್ಲ ಸರದಾರರೂ ಮರುಗಿದರು

ಆದರೆ ತುರುಕ ದಳಕ್ಕೆ ಆಪತ್ತು ಬಂದುದನ್ನು ನೋಡಿ ಎಂಭತ್ತು ಸಾವಿರ ದಳದ ಅಧಿಪತಿಯಾದ ತಂಬೂರ ಖಾನನು ರಾಮನ ಸೈನ್ಯದ ಮೇಲೆ ನಡೆದನು. ಬೇಡರು ಇದನ್ನು ನೋಡಿ ಜೋಡು ಸಿಂಗಾಡಿ ಪೆಟ್ಟಲುಗಳಿಂದ ಖಾನನ್ನು ಮುತ್ತಿದರು. ತಂಬೂರ ಖಾನನ ಸೈನ್ಯದ ಏಟಿಗೆ ತಡೆಯಲಾರದೆ ಕಾಡು ಬೇಡರಪಡೆಯು ಹಿಂದು ಮುಂದಾಗಲು ರಾಮಯ್ಯನು ತನ್ನ ಸೈನ್ಯವು ಮುರಿದೋಡಿ ಬರುವುದನ್ನು ಕಂಡು ಬೊಲ್ಲನನ್ನು ಮುಂದಕ್ಕೆ ನಡೆಯುವಂತೆ ಮಿಾಟಿದನು. ಇವನ ಹಿಂದೆ ಮಾನ್ಯೆಯರೆಲ್ಲ ಹೊರಟರು. ರಾಮಯ್ಯನು ತುರುಕರ ದಳವನ್ನು ಹೊಕ್ಕು ಸೊಕ್ಕಾನೆಯು ಕದಳಿಯ ತೋಟವನ್ನು ಹೊಕ್ಕು ಕೆಡಿಸುವಂತೆ ಲೆಕ್ಕವಿಲ್ಲದಷ್ಟು ತುರುಕರ ಸೈನ್ಯವನ್ನು ಕೆಡವಿ ತನ್ನೊಡನಾಡಿಗಳೊಡನೆ ಹಿಂದಕ್ಕೆ ತಿರುಗಿ ಕುಮ್ಮಟ ದುರ್ಗವನ್ನು ಸೇರಿದನು.

ಯುದ್ಧ ಭೂಮಿಯೆಲ್ಲಾ ಶವಮಯ ರಣಮಯವಾಯಿತು. ಸತ್ತವರ ಸಂಖ್ಯೆಯು ಎಣಿಕೆ ಇಲ್ಲದಂತಾಯಿತು.

"ನಾವು ರಾಮನನ್ನು ಕೆಣಕಿ ಕೆಟ್ಟೆವು. ರಾಮನೊಡನೆ ಕಾಳಗವು ನಮಗೆ ಅಣಕವಾಗಿದೆ. ಭಾಪು ! ಭಾಪು ! ರಾಮನು ರಣರಂಗದಲ್ಲಿ ತನ್ನ ಕೈ ಚಳಕವನ್ನು ತೋರಿದನು. ಈ ರೀತಿಯ ಪರಾಕ್ರಮಿಯನ್ನು ಇದುವರೆಗೂ ನಾನು ಎಲ್ಲಿಯೂ ನೋಡಲಿಲ್ಲ,"

ಎಂದು ನೇಮಿಖಾನನು ಬೆರಗಾಗಿ ಶತ್ರುವಿನ ಶೌರ್ಯವನ್ನು ಕೊಂಡಾಡಿದನು,

ನೇಮಿಯು ಧೈರ್ಯಗುಂದದೆ ತನ್ನ ಉಳಿದ ದಂಡನ್ನೆಲ್ಲಾ ಒಟ್ಟು ಗೂಡಿಸಿ ಬೇಡರ ಮೇಲೆ ಪುನಃ ಸುತ್ತುಗಟ್ಟಿದನು. ಬೇಡರನ್ನು ಹಿಂದಕ್ಕೋಡಿಸುತ್ತಾ ಅಲ್ಲಲ್ಲಿ ಪಾಳೆಯವನ್ನು ಬಿಡುತ್ತಾ ಕುಮ್ಮಟದುರ್ಗದ ಕೋಟೆಯನ್ನು ಮುತ್ತಿದನು.

ಕೋಟೆಯನ್ನು ಸುತ್ತುಗಟ್ಟಿದ ಅಪಾರವಾದ ಸೈನ್ಯವನ್ನು ಕಂಡು ಕಂಪಿಲರಾಯನು ಭಯಚಕಿತನಾದನು.

"ನಾವು ಬಡವರು. ಸುಲ್ತಾನನನ್ನು ಕೆಣಕಿ ಈತೊಂದರೆಯನ್ನು ರಾಮನು ತಂದನು. ದೊರೆತನವು ಉಳಿಯುವ ಸಂಭವವಿಲ್ಲ", ಎಂದು ಚಿಂತಿಸಿ ಮಂತ್ರಿ ಬೈಚಪ್ಪನನ್ನೂ ರಾಮಯ್ಯನನ್ನೂ ಕರೆಸಿದನು. ರಾಮಯ್ಯನು ಅಂದಿನ ಯುದ್ಧದ ಪರಿಯನ್ನೆಲ್ಲಾ ತಂದೆಗೆ ವಿವರಿಸಿ ತಂದೆಗೆ ಉಂಟಾದ ಕರಕರೆಯನ್ನು ಕಂಡು ಆತನನ್ನು ಸಮಾಧಾನ ಮಾಡಿದನು.

"ಜಟ್ಟಂಗಿ ರಾಮೇಶನ ದಯವಿರಲು ಹೆದರಬೇಕಾದ:ದಿಲ್ಲ. ಶತ್ರುಗಳನ್ನು ಓಡಿಸಿ ಕುಮ್ಮಟವನ್ನು ಜೋಕೆ ಮಾಡುವೆನು; ನೇಮಿಯ ದಂಡು ಎಷ್ಟು ಬಂದರೂ ನಮ್ಮ ಸೈನ್ಯಕ್ಕೆ ಒಂದು ದಿನದ ಆಹುತಿಗೆ ಸಾಲದಾಗಿರುತ್ತದೆ. ಈ ವಿಷಯದಲ್ಲಿ ಸಂದೇಹಪಡಬೇಕಾದುದಿಲ್ಲ. ಈ ದಿವಸ ರಾತ್ರೆ ತುರುಕರ ಸೈನ್ಯದ ಮೇಲೆ ಬಿದ್ದು ಕಗ್ಗೊಲೆಯನ್ನು ಮಾಡುವೆನು. ನಮ್ಮವರ ಸಾಹಸವನ್ನು ನೋಡು," ಎಂದು ರಾಮನು ಬೈಚಪ್ಪನಿಗೆ ತಿಳಿಸಿದನು

ಅಂದಿನ ಕಗ್ಗೊಲೆಯನ್ನು ನೋಡಲಾರೆನೋ ಎಂಬಂತೆ ಸೂರ್ಯನು ಪಡುವಣ ಬೆಟ್ಟದ ಹಿಂದಕ್ಕೆ ಹೋಗಿ ಮರೆಯಾದನು. ಕಗ್ಗೊಲೆಗೆ ಈ ದಿವಸ ಹೋಗಬೇಕು, ಎಂದು ರಾಮಯ್ಯನು ಹೇಳಲು ಬಾದೂರಖಾನನು ಸಭೆಯಲ್ಲಿ ಎದ್ದು,

"ಈ ದಿವಸದ ಕಗ್ಗೊಲೆಗೆ ನನಗೆ ಅಪ್ಪಣೆಯನ್ನು ಕೊಡಿ; ಆನೆಯ

ಹಿಂಡಿನ ಮೇಲೆ ಬಿದ್ದ ಸಿಂಹದಂತೆ ನೇಮಿಯ ಸೈನ್ಯದ ಮೇಲೆ ಬಿದ್ದು ತುಂಡರಿಸಿ ನಿಮ್ಮ ಪಾದಕ್ಕೆ ಅವನ ತಲೆಯನ್ನು ತಂದೊಪ್ಪಿಸುವೆನು,"

ಎಂದು ಪ್ರಾರ್ಥಿಸಲು ರಾಮಯ್ಯನು ಬಾದೂರಖಾನನಿಗೆ ವೀಳೆಯ ಉಡುಗೊರೆಯನ್ನು ಕೊಟ್ಟು ಕಾಮುವ ಸುಭಟರನ್ನು ಅವನೊಡನೆ ಕಳುಹಿಸಿದನು. ಬಾದೂರ ಖಾನನು ಧೀರವಾನ್ಯರೊಡಗೂಡಿ ನಡುರಾತ್ರಿಯಲ್ಲಿ ಚೋರಗಂಡಿಯಿಂದ ಹೊರಕ್ಕೆ ಹೊರಟು ನೇಮಿಯ ಡೇರೆಯನ್ನು ಸುತ್ತುಗಟ್ಟಿದನು. ಕಾಳಕತ್ತಲೆಯಲ್ಲಿ ಹೊಡೆಯಿರಿ, ಕೊಲ್ಲಿರಿ ಎಂದು ಅಬ್ಬರಿಸುತ್ತಾ ಅನೇಕ ಖಾನರನ್ನು ಕಡಿದು ಹಾಕಿದರು. ದಂಡಿನೊಳಗೆ ಗಲಿಬಿಲಿ ಆಯಿತು. ಕತ್ತಲೊಳಗೆ ಎತ್ತಲೂ ಹೋಗಲರಿಯದೆ ಹಿಂದು ಮುಂದು ಕಾಣದೆ ಶತ್ರುಗಳು ಓಡಿದರು. ನೇಮಿಯು ಬಂದು ಹರಿದಾರಿ ಹಿಂದಕ್ಕೆ ಹೋಗಿ ತನ್ನ ಖಾನರನ್ನು ಕೂಡಿಕೊಂಡನು. ಆ ಹೊತ್ತಿಗೆ ಹತ್ತು ಸಾವಿರ ತಲೆಗಳು ನೆಲಕ್ಕುರುಳಿದವು. ಬಾದೂರಖಾನನು ಅನೇಕ ಕುದುರೆಗಳನ್ನು ಸೆರೆ ಹಿಡಿದುಕೊಂಡು ಜಯಧ್ವನಿಯೊಡನೆ ಕುಮ್ಮಟ ದುರ್ಗವನ್ನು ಹೊಕ್ಕನು.

ಓಡಿಹೋಗಿದ್ದ ನೇಮಿಯು ಬೆಳಗಾದ ಮೇಲೆ ಹಿಂತಿರುಗಿ ಕುಮ್ಮಟ ದುರ್ಗವನ್ನು ಮುತ್ತಿ ಹೊರಪೇಟೆಯನ್ನು ಲೂಟ ಮಾಡಿದನು. ಅಲ್ಲಲ್ಲಿ ಕೋಟೆಗೆ ಗಜವನ್ನೂ ಹಾಕಿದರು. ಕೋಟೆಯನ್ನು ಒಡೆದು ಒಳಹೊಕ್ಕರು. ಕೋಟೆಯನ್ನು ವಜೀರರು ಮುತ್ತಿಗೆಮಾಡಿ ಬೇಡಪಡೆಯನ್ನು ಹೊಡೆಯುತ್ತಾ ಖಾನರು ನೂರಾರು ಬೇಡರನ್ನು ಕೊಂದರು. ಶತ್ರುಗಳ ಏಟನ್ನು ತಾಳಲಾರದೆ ಬೇಡರು ಒಳಕೋಟೆಯನ್ನು ಹೊಕ್ಕರು. ಒಳಕೋಟೆಯನ್ನೇರಿ, ಶಳೆಗೋಲು ಬಾಣ, ಪೆಟ್ಟಲುಗಳನ್ನು ಎಸೆದು ಖಾನರ ಕಡೆಯುವರು ಕೋಟೆಯ ಬಳಿ ಸುಳಿದಾಡದಂತೆ ಮಾಡಿದರು. ಮರೆಹೊಕ್ಕವರನ್ನು ಬಿಟ್ಟುಕೊಡುವುದಿಲ್ಲವೆಂಬ ಕಹಳೆಗಳು ದುರ್ಗದೊಳಗಿನಿಂದ ಘೋರ್ಗರೆಯುತ್ತಿದ್ದವು. ಧರೆಯ ರಾಯರ ಗಂಡ ರಾಮನು ಯುದ್ಧಕ್ಕೆ ಸನ್ನದ್ಧನಾಗಿ ಹೊರಟನೆಂದು ಚಿನ್ನದ ಕಹಳೆಗಳು ಕೂಗುತ್ತಿದ್ದವು.

"ಆದರೆ ಬಾದೂರ ಖಾನನನ್ನು ನಾನು ಎಂದಿಗೂ ಬಿಟ್ಟುಹೋಗುವುದಿಲ್ಲ; ಅವನನ್ನು ನನಗೆ ಒಪ್ಪಿಸಿ ನಿಮ್ಮ ಕೋಟೆಯನ್ನು ಉಳಿಸಿಕೊಳ್ಳುವುದು ಲೇಸು," ಎಂದು ನೇಮಿಖಾನನು ತನ್ನ ಚಾರರ ಸಂಗಡ ಹೇಳಿ ಕಳುಹಿಸಿದನು. ಈ ಸುದ್ದಿಯನ್ನು ತಂದ ಚಾರರಿಗೆ,

"ಶರಣಾಗತರನ್ನೊಪ್ಪಿಸಲು ತಂದೆಯ ಅಪ್ಪಣೆಯು ಇಲ್ಲ; ಶತೃಗಳನ್ನು ಒಂದೆರಡು ದಿನದೊಳಗೆ ಕೊಂದು ಭೂತಗಣಕ್ಕೆ ಹಬ್ಬವನ್ನು ಮಾಡುವೆನು; ಮಾಗಿದ ಹಣ್ಣಿಗೆ ಕೋಲು ಶಳೆಗಳು ಬೇಕಾಗಿಲ್ಲ; ಯುದ್ಧ ಮುಖದಲ್ಲಿಯೇ ನೇಮಿಯನ್ನು ನೋಡುವೆನು," ಎಂದು ರಾಮಯ್ಯನು ಉತ್ತರವನ್ನು ಹೇಳಿ ಕಳುಹಿಸಿದನು. ಈ ಸುದ್ದಿಯನ್ನು ಕೇಳಿ ನೇಮಿಯು ತನ್ನ ಖಾನ ವಜೀರರಿಗೆ ತಿಳಿಸಿ, ಮುಂದಿನ ರಾಜಕಾರ್ಯವನ್ನು ಮಾಡುವ ವಿಷಯದಲ್ಲಿ ಅವರ ಅಭಿಪ್ರಾಯವನ್ನು ಕೇಳಿದನು.

"ನಮಗೆ ಅಪ್ಪಣೆಯನ್ನು ಕೊಡಿ; ಕುಮ್ಮಟ ದುರ್ಗಕ್ಕೆ ಲಗ್ಗೆ ಮಾಡಿ ಕೋಟೆಯನ್ನು ಕೆಡವಿ ರಾಮನನ್ನು ಸೆರೆಹಿಡಿದು ನಿಮಗೆ ಒಪ್ಪಿಸಿ ಸುಲ್ತಾನನನ್ನು ಕಾಣುವೆವು" ಎಂದು ಖಾನರು ತಿಳಿಸಿದರು.

ಇತ್ತಲಾಗಿ ರಾಮಯ್ಯನು ಬೈಚಪ್ಪನನ್ನು ಕುರಿತು ಮಂದಿ ಮಕ್ಕಳಿಗೆ ತುಪ್ಪದೂಟವನ್ನು ಮಾಡಿಸುವಂತೆ ಹೇಳಿ ಕಳುಹಿಸಿದನು. ಕಂಪಿಲರಾಯನು ತನ್ನ ಮಗನ ಅಭಿಪ್ರಾಯದಂತೆ ನಡೆಸುವುದಾಗಿ ತಿಳಿಸಿದನು. ರಾಮಯ್ಯನು ತನ್ನರಮನೆಗೆ ಹೋಗಿ ಇಂದುಮುಖಿಯರ ಮೇಳದಲ್ಲಿ ಚಂದದಿಂದ ಇದ್ದು ಸುಖನಿದ್ರೆಗೈದು ಉಷಃಕಾಲಕ್ಕೆ ಮುಂಚೆಯೇ ಎದ್ದು ಜಟ್ಟಂಗಿಯ ರಾಮೇಶನಿಗೆ ನಮಸ್ಕರಿಸಿದನು. ರಾಜಭೋಜನವನ್ನು ಮಾಡಿ ತನ್ನ ವಲ್ಲಭೆಯರನ್ನು ಕರೆದು ಅರಮನೆಯಲ್ಲಿದ್ದ ಒಡವೆ ವಸ್ತ್ರಗಳನ್ನೆಲ್ಲಾ ತರಿಸಿದನು. ಅವನ ಮುದ್ದಿನ ಮಡದಿಯರು ಸುರತಾಳ ನೇಮಿಯ ಗಂಡನೆಂಬ ಕೊರಳ ಪದಕವನ್ನು ಇಟ್ಟರು. ಧರೆಯ ರಾಯರ ಗಂಡನೆಂಬ ಉಂಗುರವನ್ನೂ, ಉತ್ತುಂಗ ರಾಯನ ಗಂಡನೆಂಬ ಜೋಡು ಮುತ್ತಿನ ಚೌಕಳಿಯನ್ನೂ, ಮುಂಗಲಿ ರಾಯನ ಗಂಡನೆಂಬ ಉಂಗುರ ಪಚ್ಚೆಯ ಕಡಗಗಳನ್ನೂ, ಹುಳಿಯಾರು ಮಾರಿಗೊಂಡನ ಗಂಡನೆಂಬ ರುಳಿಯ ಸರಪಳಿಯನ್ನು ಒಪ್ಪವಾಗಿ ಇಟ್ಟರು. ಐದು ಜನ ಮಡದಿಯರು ರಾಮಯ್ಯನಿಗೆ ತಿಲಕವನ್ನಿಟ್ಟು ವೀಳೆಯವನ್ನು ಕೊಟ್ಟು ಸಂತೋಷದಿಂದ ಬೀಳ್ಕೊಟ್ಟರು.

ರಾಮಯ್ಯನು ಹರಿಯಾಲದೇವಿಯ ಮನೆಗೆ ಹೋಗಿ ತನ್ನ ತಾಯಿಗೆ ವಂದಿಸಿ ನೇಮಿಯೊಡನೆ ಕಾಳಗಕ್ಕೆ ಅಪ್ಪಣೆಯನ್ನು ಬೇಡಿದನು. ಹರಿಯಾಲದೇವಿಯು ಕಂದನನ್ನು ಹಿಡಿದಪ್ಪಿಕೊಂಡು, 'ಊಟ ಮಾಡಿ ಬಂಟರಿಗೆ ಊಟಮಾಡಿಸಿ ಹೊರಡು' ಎಂದು ಹೇಳಿದಳು. ತಾಯಿಯ ಅಪ್ಪಣೆಯಂತೆ

ಠಾಣ್ಯದ ರಾಹುತರು, ಗುರಿಕಾರರು, ಮಾನ್ಯೆಯರು, ಠಾಣ್ಯದ ಗಡಿನಾಡಿನವರು, ಅಣ್ಣ ಕಾಟಣ್ಣ, ಅರಸು ಮಕ್ಕಳು ಮುಂತಾದವರನ್ನೆಲ್ಲಾ ಕರೆಸಿದನು. ಹರಿಯಮ್ಮನು ಎಲ್ಲರಿಗೂ ಚೊಕ್ಕ ಭೋಜನವಿಕ್ಕಿ ಬಿಳಿಯ ವೀಳೆಯದೆಲೆಯನ್ನು ಕೊಟ್ಟು ರಾಜಪುತ್ರರೊಡನೆ ಎಕ್ಕಟಿಗನೂ ಯುದ್ಧಕ್ಕೆ ಹೊರಡಲು ಹುರಿದುಂಬಿಸಿದಳು.

ರಾಮಯ್ಯನು ತಂದೆಯ ಪಾದಕ್ಕೆ ನಮಸ್ಕರಿ ಉಪ್ಪರಿಗೆಯಲ್ಲಿ ನಿಂತು ತನ್ನ ಯುದ್ಧವನ್ನು ನೋಡುತ್ತಿರುವಂತೆ ಕೇಳಿಕೊಂಡು ತಾನು ನೇಮಿಯನ್ನು ಹೊಡೆದೋಡಿಸುವೆನೆಂದು ಹೇಳಿ ಅಪ್ಪಣೆಯನ್ನು ಪಡೆದು ಹೊರ ಚಾವಡಿಗೆ ಬಂದನು. ಅಲ್ಲಿಗೆ ಮಂತ್ರಿಯ ಮಕ್ಕಳು, ಹಂಪ ರಾಜ, ಕೆಂಪ ರಾಜ, ಬಾನೂರ ಖಾನ, ಬಸವರಾಜಯ್ಯ, ದೇವಿಶೆಟ್ಟಿಯಲಿಂಗ, ಬೇವಿನ ಶಿಂಗಯ್ಯ, ಕೊಳ್ಳಿಯ ನಾಗ, ಚಾರಾಮರಾಯನ ಮಕ್ಕಳು, ಮುಂತಾದ ನುರಿತ ರಾಹುತರನ್ನೆಲ್ಲಾ ಕಾದಾಡುವುದಕ್ಕನುವಾಗಲು ಕರೆಸಿದನು. ಒಟ್ಟು ಒಂದು ಲಕ್ಷ ಫೌಜು ಬಂದು ಸೇರಿತು. ಎಣಿಕೆ ಇಲ್ಲದಷ್ಟು ಹೊನ್ನನ್ನು ಭಟರಿಗೆ ಹಂಚಿದನು. ಬಣಗುಗಳ ಗಂಡನೆಂದು ಕಹಳೆಗಳು ಮೊಳಗುತ್ತಿರಲು ಅರವತ್ತು ಸಾವಿರ ಸುಭಟರೊಡನೆ, ದುರ್ಗವನ್ನಿಳಿದು, ಹೊರ ಬಾಗಿಲನ್ನು ದಾಟಿ, ಊರ ಮುಂದಿನ ಬಯಲಿಗೆ ಬಂದಿಳಿದನು.

೧೨

ರಾಮಯ್ಯನು ಹೊನ್ನಂದಣವನ್ನೇರಿ ಹೊರಟು ರಾಮೇಶನ ಗುಡಿಗೆ ಬಂದು ಹಿಡಿ ಹಣವನ್ನು ಕಾಣಿಕೆಯಾಗಿ ಕೊಟ್ಟು, ಅಡ್ಡಬಿದ್ದು, ದೇವರ ಗಂಧ ಪ್ರಸಾದವನ್ನು ಕೈಕೊಂಡು ಮುಂದಕ್ಕೆ ನಡೆದನು. ರಣರಂಗಕ್ಕೆ ಬಂದು ಬೊಲ್ಲನನ್ನೇರಿ ಪರಿವಾರದೊಡನೆ ಪೇರಿ ಮಾಡುತ್ತಿದ್ದನು.

ಬಿಲ್ಲಿನ ಫೌಜಿನವರ ಮುಂಚೂಣಿ ನಡೆಯಿತು. ಭಲ್ಲೆ ಮತ್ತು ಈಟಿಯ ಫೌಜಿನವರು ಎಡಬಲಗಳಲ್ಲಿಯೂ ಕಲ್ಲುಕೋಟೆಯ ಚಿಕ್ಕನ ಫೌಜು ಮುಂಭಾಗದಲ್ಲಿಯೂ, ಕುದುರೆಯ ಫೌಜು ಹಿಂಭಾಗದಲ್ಲಿಯೂ ನಡೆಯುತ್ತಿದ್ದವು. ಮಾನ್ಯೆಯರನ್ನು ಎದುರು ಬರುವ ಖಾನರ ಮೇಲೆ ನುಗ್ಗುವಂತೆ ರಾಮಯ್ಯನು

ಅಪ್ಪಣೆ ಮಾಡಿದನು. ಚಾರಾಮುರಾಯನ ಮಕ್ಕಳು, ಆರುಸಾವಿರ ಕುದುರೆ, ಹೊಸರಾಯನ ಮಕ್ಕಳು, ದುರ್ಗದ ಹೆಸರಾದ ಮಾನ್ಯೆಯರು, ಗಟಿವಾಡದವರು, ಹೆಸರಾದ ಗುರಿಕಾರರು ಮುಂತಾದವರುಳ್ಳ ಒಂದು ಫೌಜನ್ನು ಮಾಡಿ ಕಾಟಣ್ಣನಿಗೆ ಕೊಟ್ಟು ಎಡಬಲದಿಂದ ಏರಿಬರುವ ಶತ್ರು ಸೈನ್ಯವನ್ನು ಎದುರಿಸುವಂತೆ ತಿಳಿಸಿದನು. ಈ ರೀತಿ ರಾಮನ ದಂಡು ತಮ್ಮ ಮೇಲೆ ಏರಿ ಬಂದು ಮೇಲೆ ಬೀಳುತ್ತಿರುವುದನ್ನು ಕಂಡು ನೇಮಿಯ ಸೇನೆಯವರು ಮುತ್ತಿಗೆ ಎತ್ತಿ ಓಡಿದರು. ನೇಮಿಯ ಶಿಬಿರದಲ್ಲಿ ಗಲಿಬಿಲಿಯಾಯಿತು. ಈ ಗದ್ದಲವನ್ನು ನೇಮಿಯು ಕೇಳಿ, ರಾಮನು ದುರ್ಗವನ್ನಿಳಿದು ಕಾಳಗಕ್ಕೆ ಎದುರಾಗಿ ಬರುತ್ತಿರುವ ಸುದ್ದಿಯನ್ನು ಚಾರರಿಂದ ತಿಳಿದವನಾಗಿ ತನ್ನ ಖಾನರನ್ನೆಲಾ ಯುದ್ಧಕ್ಕೆ ಸಿದ್ಧವಾಗುವಂತೆ ಅಪ್ಪಣೆಮಾಡಿ ತಾನು ಮೀಸೆಯನ್ನು ತಿದ್ದಿ ಆನೆಯನ್ನೇರಿದನು.

ನೇಮಿಯ ಫೌಜು ಸಾಗರವು ಎದ್ದು ಬರುವಂತೆ ರಾಮನಮೇಲೆ ಬೀಳಲು ಮುಂದಕ್ಕೆ ನಡೆಯಿತು. ಎಂಭತ್ತು ಸಾವಿರ ಕುದುರೆಯವರು ಹಿಂದೆ ಬರುತ್ತಿದ್ದರು. ಒಂದು ಲಕ್ಷ ಫೌಜು ಮುಂಭಾಗದಲ್ಲಿ ನಡೆಯಿತು. ಎಡಬಲದಲ್ಲಿ ಐವತ್ತು ಸಾವಿರ ದಂಡು ಬರುತ್ತಿತ್ತು. ಡೊಳ್ಳು, ನಿಸ್ಸಾಳ, ಕಹಳೆ, ನಗಾರಿ, ನೌಬತ್ತು ಮೊಳಗುತ್ತಿದ್ದವು. ಇವರೊಡನೆ ಪಾಳೆಯಗಾರರು ಅರವತ್ತು ಸಾವಿರ ದಂಡಿನೊಡನೆ ಬರುತ್ತಿದ್ದರು. ಇಂಥಾ ಸಂದಣಿಯನ್ನು ಬಣ್ಣಿಸುವುದಸದಳವಾಗಿತ್ತು. ಉಭಯ ಬಲವೂ ಗುಡ್ಡವಾಕಾರದಲ್ಲಿ ಸಂಧಿಸಿ ಕಡಿದಾಡಿದವು. ಅಂದಿನ ಕಾಳಗವನ್ನು ಏನೆಂತ ಬಣ್ಣಿಸಲಿ! ದೊಳ್ಳನ್ನು ಕಡಿಯಲು ಕರುಳು ಸುರಿದು, ಕಡಿದ ಬಾಳೆಯ ಮರದಂತೆ ಶರೀರಗಳು ಉರುಳಿದುವು. ತಲೆಗಳು ಉರುಳಿ ಬೀಳುವುವನ್ನು ತಿಳಿಯದೆ ಮುಂಡಗಳು ಮುಂದಕ್ಕೆ ನಡೆಯುತ್ತಿದ್ದವು. ಈ ರೀತಿಯಲ್ಲಿ ಕಾಲ್ಬಲವು ಹೋಡೆದಾಡುತ್ತಿರಲು ನೇಮಿಯ ಕುದುರೆಗಳು ರಾಮನಿದ್ದಲ್ಲಿಗೆ ಬಂದು ಮುತ್ತಿದವು. ರಾಮಯ್ಯನು ತನ್ನ ಕುದುರೆಯವರನ್ನು ಅದರ ಮೇಲೆ ನಡೆಸಿದನು. ಅರಸು ಮಕ್ಕಳು ನಬಿಯಾಖಾನನನ್ನು ಕೆಡವಿದರು.

ರಾಮನ ಬಲವನ್ನು ಕೆಡವುತ್ತಾ ನೇಮಿಯ ಖಾನರು ಮುಂದಕ್ಕೆ ನುಗ್ಗಲು ಶಬರರಿಗೆ ಕೆಂಧೂಳು ಮುಸುಕಿ ಮುಂಗಾಣದಾಯ್ತು. ಇಕ್ಕೆಲದಲ್ಲಿ ಬರುವ ಫೌಜನ್ನು ಕಂಡು ರಾಮಯ್ಯನು ಬೊಲ್ಲನನ್ನು ಮುಂದಕ್ಕೆ ನುಗ್ಗಿಸಿ

ಆದರ ಕಾಲುಗಳಿಂದ ಶತೃಗಳನ್ನು ತುಳಿಸಿದನು, ಇವರ ಎಡಬಲದಲ್ಲಿದ್ದ ಮಾನ್ಯೆಯರೆಲ್ಲರೂ ತುರುಕರನ್ನು ಎದುರಿಸಿದರು. ರಾಮಯ್ಯನು ತುರುಕರ ಮೇಲೆ ಬಿದ್ದು ಕತ್ತಿಯಿಂದ ಒಬ್ಬನನ್ನು ಕಡಿಯುವುದರೊಳಗೆ ಬೊಲ್ಲನು ತನ್ನ ಬಳಿ ಸುಳಿವ ಖಾನರಲ್ಲಿ ನಾಲ್ವರನ್ನು ಕಚ್ಚಿ ಎಳೆದುಕೊಂಡುಕೊಂಡು ಕಾಲಲ್ಲಿ ತುಳಿದು ಅವರನ್ನು ಕೊಲ್ಲುತ್ತಿದ್ದಿತು. ಮನ್ನೂಲ ಮಾಚನು ಶತೃಗಳ ತಲೆಯನ್ನು ತಂದೊಪ್ಪಿಸುತ್ತಿದ್ದನು.

ಚನ್ನಬಾಣದ ಬಾಸನು ಬಾಣದಿಂದ ಹೊಡೆದು ಮುನ್ನೂರು ಕುದುರೆಯನ್ನು ಕೊಂದನು. ಬೂಟಾಕ ಬೊಮ್ಮಯ್ಯನೂ, ಎಕ್ಕಟಿಗರೂ, ಬಿಟ್ಟ ಅಂಬುಗಳು ಶತ್ರುಗಳ ಕುದುರೆಗಳ ಬೆನ್ನಿನಲ್ಲಿ ನೆಟ್ಟವು. ಗುತ್ತಿಯ ಖಾನನು ತನ್ನ ಹತ್ತಿರ ಬಂದವರ ಮೇಲೆ ತನ್ನ ಮಂದಿಯನ್ನು ಬಿಟ್ಟು ಅವರ ಕುತ್ತಿಗೆಗಳನ್ನು ಕೊಯ್ಯಿಸುತ್ತಾ ತುರುಕರ ಪಡೆಯನ್ನು ಮುತ್ತಿದನು. ಎನುಮಾಲ ಚಿತ್ತನು, ಎರಬೋತು ಗಂಗನು, ಚಿನುಮಾದ ಚಿಕ್ಕತಮ್ಮಗನೂ, ಪೆನಗೊಂಡೆಯ ಪಾಪನೂ ರಣದುಲ್ಲಾಖಾನನನ್ನು ಮುತ್ತಿ ಅವನ ಸಾವಿರ ಕುದುರೆಗಳನ್ನೂ ಲೆಕ್ಕವಿಲ್ಲದಷ್ಟು ಜನಗಳನ್ನೂ ಕೊಂದು ಮುಂದುವರಿದು ಖಾನರನ್ನು ಮುತ್ತಿದರು. ರಣದುಲ್ಲಾಖಾನನು ಬಿದ್ದು ಮಡಿದನು. ಕಬ್ಬುಲಿಗರ ನಾಗ, ಹೆಬ್ಬುಲಿಗರ ಚಿಕ್ಕ ಬಯ್ಯಣ್ಣ, ಅಬ್ಬಯ್ಯನಾಯಕ ಮುಂತಾದವರು ಅಬ್ದುಲಾ, ಖಾನನನ್ನು ಹೊಡೆದು ತುರುಕರ ಪಡೆಯನ್ನು ತಬ್ಬಿಬ್ಬಿ ಮಾಡಿದರು.

ಅಸಗೋಡು ಬಸವನು, ಅಕ್ಕಸಾಲೆಯ ಚಿಕ್ಕನು ಹೊಸಮಂದಿಯನ್ನು ಸೇರಿಸಿಕೊಂಡು ಶತ್ರುಗಳ ತಲೆಯನ್ನು ಹೊಡೆಯುತ್ತಾ ನೇಮೀಖಾನನ ದಂಡಿನ ಮೇಲೆ ಬಿದ್ದರು. ಜಗಲೂರು ಚಿಕ್ಕನು ಬೊಮ್ಮನು, ಕಾಮಗೇತಿಯ ತಿಮ್ಮ, ಒಕ್ಕಲಿಗರ ಮುದ್ದ, ರಕ್ಕಸ ಮಾದ, ನೆಲ್ಲೂರ ನಲ್ಲ, ನಿಡುಗಲ್ಲು ಕಾಮ, ಪೆನ್ನ ಮೊದಲಾದವರು ಸೊಕ್ಕಿದ ನೇಮಿಯ ದಂಡಿನ ಮೇಲೆ ಬಿದ್ದು ಭಾಪು ಭಾಪು ಎನ್ನುವಂತೆ, ಶತೃಗಳನ್ನು ತುಂಡರಿಸಿದರು.

ಬಲ್ಲಿದಾಖಾನರನ್ನು ಹಿಂದುಹಿಂದಕ್ಕೆ ಅಟ್ಟುತ್ತಾ ಮಾದಿಗರ ಹಂಪನು ನೇಮಿಯ ಬಳಿಗೆ ಬಂದನು. ಹೊಲೆಯರ ಹೊನ್ನೂರಗನು ಹಲವು ಮಂದಿಯನ್ನು ಕೂಡಿಕೊಂಡು ಬಲದಲ್ಲಿ ಬರುತ್ತಿದ್ದ ಖಾನರನ್ನು ಕೊಂದನು. ರಾಮಯ್ಯನ ಖಾಸಾದಂಡು ಶತೃಗಳ ಲೆಕ್ಕವಿಲ್ಲದಷ್ಟು ಕುದುರೆಗಳನ್ನು ಕೊಂದಿತು. ನೇಮಿಖಾನನ ಸುತ್ತುಮುತ್ತಲೂ ಎಡಬಲದಲ್ಲಿಯೂ ರಕ್ತದ

ಕೋಡಿ ಹರಿಯಿತು, ರಾಮಯ್ಯನು ನೇಮಿಯ ಮೇಲೆ ಬೊಲ್ಲನನ್ನು ಏರಿ ಬಂದು ಬಿಲ್ಲಿನಿಂದ ಹೊಡೆದನು. ಎಲ್ಲ ಖಾನರನ್ನು ಮುತ್ತಿ ಲಕ್ಷ್ಯವಿಲ್ಲದೆ ಅವರನ್ನು ತುಳಿದು ಪಕ್ಷಿಯಂತೆ ಬೊಲ್ಲನು ಶತೃಗಳ ಮಧ್ಯದಲ್ಲಿ ಹಾರಾಡುತ್ತಿದ್ದನು,

ನೇಮಿಖಾನನು ಸಿಕ್ಕದೆ ಓಡಿಹೋಗಿ ತನ್ನ ಕುದುರೆಯ ದಂಡನ್ನು ಸೇರಿಕೊಂಡನು, ರಾಮಯ್ಯನು ನೇಮಿಖಾನನನ್ನು ಹುಡುಕುತ್ತಾ ಅವನ ಕಾಲಾಳುಗಳ ಮೇಲೆ ಬಿದ್ದು ಸಾಲು ತಲೆಗಳನ್ನು ಹೊಯ್ಯಿಸುತ್ತಾ ಬಾಳೆಯ ತೋಟವನ್ನು ಹೊಕ್ಕ ಆನೆಯಂತೆ ಶತೃಗಳ ಸೈನ್ಯವನ್ನು ಕಡಿದೊಟ್ಟಿದನು. ನೇಮಿಖಾನನ ಕಾಲ್ಬಲವು ಮುರಿದೋಡಿತು. ಮೂರು ಸಾವಿರ ಮಂದಿ ಮಡಿದ ಭೂಮಿಯಲ್ಲಿ ಒರಗಿದರು. ಘಾಯ ಹೊಂದಿದವರ ಸಂಖ್ಯೆಯ ಲೆಕ್ಕವೇ ಇಲ್ಲ. ಬಿರುದಿನ ಭಂಟರು ಶತೃಗಳ ಅರುವತ್ತು ಸಾವಿರ ಕುದುರೆಯವರ ಮೇಲೆ ಬಿದ್ದು ಸೋನೆ ಮಳೆಯಂತೆ ಬಾಣಗಳನ್ನು ಸುರಿಸುತ್ತಾ ಅರಿಬಲವನ್ನು ಕಂಗೆಡಿಸಿದರು.

ಮುಂಗುಲಿಖಾನನು ಬೊಲ್ಲನಮೇಲೆ ಏರಿ ಬರುತ್ತಿದ್ದ ರಾಮನನ್ನು ಹೊಡೆಯಲು ರಾಮಯ್ಯನು ಆ ಪೆಟ್ಟನ್ನು ತಪ್ಪಿಸಿಕೊಂಡು ಬೊಲ್ಲನನ್ನು ಮೀಟಿ "ದೊಡ್ಡ ಖಾನನು ನೀನು" ಎನ್ನುತ್ತಾ ಅವನ ಮೇಲೆ ಬಿದ್ದು ಒಂದೇ ಏಟಿಗೆ ಅವನನ್ನು ಕಡಿದನು ಮುಂಗುಲಿಖಾನನು ಬಿದ್ದುದನ್ನು ನೋಡಿ ಅಲ್ಲಿದ್ದ ವಜೀರರೆಲ್ಲ ಒಂದಾಗಿ ರಾಮನ ಮೇಲೆ ಬಂದು ಬಿದ್ದರು. ಸುತ್ತಮುತ್ತಲೂ ಕುದುರೆಗಳು ಮುತ್ತಿರಲು ರಾಮಯ್ಯನು ತನ್ನನ್ನು ಮುತ್ತಿದ ತುರುಕರುಗಳನ್ನೆಲ್ಲ ಹೊಡೆದನು. ಹಲವರು ಕರುಳು ಹರಿದು ಕಾಲು ಮುರಿದು ತೋಳ್ತೊಡೆ ತುಂಡಾಗಿ ಕುದುರೆಯಿಂದ ಕೆಳಕ್ಕೆ ಬಿದ್ದರು. ಇನ್ನು ಹಲವರು ಘಾಯಹೊಂದಿ ಹಿಂದಕ್ಕೆ ಓಡಿಬಿಟ್ಟರು.

ರಾಮಯ್ಯನು ಮೂಡಣ ದಿಕ್ಕಿನ ಫೌಜಿನ ಮೇಲೆ ಬೊಲ್ಲನನ್ನೇರಿ ಹೋಗಿ ಅವರನ್ನು ಕೋಡುಗಲ್ಲಿನ ತನಕ ಓಡಿಸಿದನು. ಉಳಿದ ತುರುಕರ ಪಡೆಯನ್ನು ತನ್ನ ಕತ್ತಿಯಿಂದ ಸವರುತ್ತಾ ಮುಂದೆ ನುಗ್ಗುತ್ತಿರಲು ನೇಮಿಯ ದಂಡು ಹೇಡಿಯಾಯಿತು. ಅಲ್ಲಿಂದ ಪಡುವಣ ದಿಕ್ಕಿಗೆ ಬೊಲ್ಲನ ಮೇಲೆ ಹೋಗಿ ವಜೀರರ ಮೇಲೆ ಬಿದ್ದು ಅವರ ತಲೆಗಳನ್ನು ಕಡಿಯಲು ತುರುಕರು ಅಡೆಯೆದ್ದು ಓಡಿದರು.

ಉತ್ತರ ದಿಕ್ಕಿನ ಫೌಜಿಗೆ ಬೊಲ್ಲನನ್ನು ನಡೆಸಿ ಅಲ್ಲಿಯ ತುರುಕರ ಪಡೆಯನ್ನು ಮುತ್ತಿಕೊಂಡು ಸವರಿ ಕಡೆಕಲ್ಲಿನವರೆಗೆ ಅವರನ್ನು ಓಡಿಸಿದನು. ಅನಂತರ ರಾಮಯ್ಯನು ಡೇರೆಯ ಬಳಿಗೆ ಕುದುರೆಯನ್ನು ನಡೆಸಿದನು. ರಾಮನ ಮಾನ್ಯೆಯರು ಕಳೆದುಳಿದ ನೇಮಿಯ ದಂಡನ್ನು ಸವರಿದರು. ಹೊಲದಲ್ಲಿ ಜೋಳದ ಸಪ್ಪೆಯು ಬಿದ್ದಂತೆ ನೇಮಿಯ ದಂಡು ಹಾಳಾಯಿತು. ಆದರೂ ನೇಮಿಯು ಓಡಿಹೋಗುತ್ತಿದ್ದ ದಂಡನ್ನೆಲ್ಲ ಪುನಃ ಕೂಡಿಸಿಕೊಂಡು ರಾಮಯ್ಯನ ಮೇಲೆ ಪುನಃ ಏರಿಬಂದನು. ಕಾಟಣ್ಣನು ಇದನ್ನು ನೋಡಿ ತನ್ನ ಮಾನ್ಯೆಯರೊಂದಿಗೆ ರಾಮಯ್ಯನ ಸಹಾಯಕ್ಕೆ ಬಂದು ನೇಮಿಯ ದಂಡನ್ನು ಮುತ್ತಿದನು. ಹೆಣಗಳು ಬಿದ್ದವು; ಮುಂಡಗಳು ಕುಣಿದವು; ರಣರಂಗವು ರಣಮಯ ಹೆಣಮಯವಾಯಿತು. ನೇಮಿಖಾನನು ರಣರಂಗವನ್ನು ಬಿಟ್ಟು ಓಡಿದನು. ಶಾಕಿನಿ ಡಾಕಿನಿ ಭೂತಗಳು ತಿಂದು ತೇಗಿ ತಣಿದು ಕುಣಿಕುಣಿದು ರಾಮನನ್ನು ಕೊಂಡಾಡಿದವು. "ರಾಮನೆದುರಿಗೆ ಯುದ್ಧ ಮಾಡುವ ವೀರರಿಲ್ಲ" ಎಂದು ಓಡುಹೋಗುವ ತುರುಕರು ಮಾತನಾಡಿಕೊಳ್ಳುತ್ತಿದ್ದರು.

ಓಡಿಹೋಗುತ್ತಿದ್ದ ನೇಮಿಯದಂಡನ್ನು ರಾಮಯ್ಯನು ಬೆನ್ನುಹತ್ತಿ ಹೋಗಲು ನೇಮಿಖಾನನು ತೊರೆಯನ್ನು ದಾಟಿ, ಬಾದಾಮಿಯವರೆಗೆ ಹಗಲಿರುಳು ನಿಲ್ಲದೆ ಓಡಿಹೋದನು.

ರಾಮಯ್ಯನು ಧರ್ಮಕಹಳೆಯನ್ನು ಊಡಿಸಿ ಅಣ್ಣ ಕಾಟಣ್ಣ ಮೊದಲಾದವರನ್ನೆಲ್ಲಾ ಹಿಂದಕ್ಕೆ ಕರೆಸಿ, ಹಲ್ಲುಕಚ್ಚಿ ಹುತ್ತವನ್ನೇರಿ ನಿಂತವರ ತಂಟೆಗೆ ಹೋಗದೆ ಕುಮ್ಮಟದುರ್ಗಕ್ಕೆ ಉಲ್ಲಾಸದಿಂದ ಹಿಂತಿರುಗಿದರು.

ಗೆದ್ದುಬರುವ ಮಗನನ್ನು ಎದುರುಗೊಳ್ಳಲು ಕಂಪಿಲರಾಯನು ಪಟ್ಟಣವನ್ನು ಶೃಂಗರಿಸಿ ತೋರಣಗಳನ್ನು ಕಟ್ಟಿಸಿದನು.

ರಾಮಯ್ಯನು ಕುಮ್ಮಟ ದುರ್ಗವನ್ನು ಸೇರಿ ರಾಮೇಶನಿಗೆ ಶರಣು ಮಾಡಿ ತಂದೆಯನ್ನು ಕಾಣಲು ಸಾರಂಗನೆಂಬ ಕುದುರೆಯನ್ನೇರಿ ಹೊರಟನು. ಉಕ್ಕಡದ ಬಳಿ ಅವರು ಬಂದಾಗ ಕುರಿಗಳನ್ನು ಕಡಿದು ನಿವಾಳಿಸಿದರು. ಅನಂತರ ರಾಜಬೀದಿಯಲ್ಲಿ ಬರುತ್ತಿರುವಾಗ ಪುರನಾರಿಯರು ಆರತಿಯನ್ನು ಬೆಳಗಿಹರಸಲು ಅರಸರು ಹೊನ್ನುಗಳನ್ನು ಆರತಿಯೊಳಗೆ ಹಾಕಿದರು. ಹರಿಯಮ್ಮನು ಹರಿವಾಣದಾರತಿಯೆತ್ತಿ ಗೆದ್ದು ಬಂದ ಮಗನನ್ನು ಹರಸಿದಳು.

ಮುಕ್ಕಣ್ಣ, ರಾಮೇಶರ ದಯದಿಂದ ಗೆದ್ದು ಬಂದ ರಾಮಯ್ಯನಿಗೆ ಅಕ್ಕ ಮಾರಮ್ಮ, ತಂಗಿ ಶಿಂಗಮ್ಮನವರು ಹರುಷದಿಂದ ಮುತ್ತಿನಾರತಿ ಎತ್ತಿದರು. ರಾಮಯ್ಯನು ಎಲ್ಲರನ್ನೂ ಅವರವರ ಮನೆಗೆ ಬೀಳ್ಕೊಟ್ಟು ತಾನು ತನ್ನರ ಮನೆಗೆ ನಡೆದನು.

ಅತ್ತಲಾಗಿ ನೇಮಿಖಾನನು ವೀರಬಲ್ಲಾಳನಿಗೂ, ಮಾರಿಗೊಂಡನಿಗೂ ಓರುಗಲ್ಲಿ ಅರಸನಿಗೂ, ಮುಂಗುಲಿಯ ದೊರೆಗೂ, ಗುತ್ತಿಯ ಜಗದಪ್ಪನಿಗೂ ಓಲೆಗಳನ್ನು ಬರೆಸಿದರು:

"ರಾಮನ ಮೇಲೆ ಎಲ್ಲರೂ ಸೇರಿ ಕಾರ್ಯವನ್ನು ಮಾಡಲೇಬೇಕಾಗಿದೆ. ಈಗ ನಾನು ಹೊಂದಿರುವ ಅಪಜಯವನ್ನು ಸಹಿಸಲಾಗುವುದಿಲ್ಲ. ರಾಮನನ್ನು ಸೆರೆಹಿಡಿದುಕೊಂಡು ಹೋಗುವುದು ಖಂಡಿತ," ಎಂದು ಆ ಕಾಗದಗಳಲ್ಲಿ ವಕ್ಕಣಿಸಿದನು. ಅಲ್ಲಿಂದ ಕೂಚು ಮಾಡಿ ಚಿಕ್ಕ ದೆಹಲಿಯ ಮಾರ್ಗವಾಗಿ ದೆಹಲಿಗೆ ಆರು ತಿಂಗಳಲ್ಲಿ ಹೋಗಿ ರಾತ್ರೆ ವೇಳೆಯಲ್ಲಿ ಮನೆಯನ್ನು ಸೇರಿದನು.

ಸುಲ್ತಾನನು ತನ್ನ ಕಡೆಯವರು ಮುರಿದೋಡಿ ಬಂದ ಸುದ್ದಿಯನ್ನು ಕೇಳಿ ನೇಮಿಖಾನನನ್ನು ಕರೆಸಿದನು. ನೇಮಿಯು ಸುಲ್ತಾನನ ಬಳಿಗೆ ಹೋಗಿ ಮುಜರೆ ಮಾಡಿದನು.

"ಬೆಟ್ಟದ ರಾಮುನಿಗೆ ಅಂಜಿ ಅವನನ್ನು ಹಿಡಿದು ತರದೆ ಬರಬಹುದೇ" ಎಂದು ಸುಲ್ತಾನನು ಖಾನನನ್ನು ಮೂದಲಿಸಿದನು.

"ಭಾಪುರೆ! ಪಾಚ್ಛಾ! ಕೋಪವನ್ನು ಮಾಡದೆ ಕೇಳು; ಈ ಪರಿಯ ಜಗಳವನ್ನು ನಾನು ನೋಡಿಯೇ ಇಲ್ಲ; ರಾಮನು ಅಪರಾಮುಹಿಮನು; ಛಲಂದಂಕನು; ಕುಮ್ಮಟದುರ್ಗವು ಅಭೇದ್ಯವಾದ ಕೋಟೆಯಾಗಿದೆ. ರಾಮಯ್ಯನು ದುರ್ಗದಿಂದ ಹೊರಗೆ ಬಂದು ಖಾನರನ್ನೆಲ್ಲಾ ನುಗ್ಗು ಮಾಡಿದನು; ಇವನ ಯುದ್ಧದ ಪರಿಯು ಬಹು ಅಚ್ಚರಿಯಾಗಿರುವುದು; ಅವನ ಕತ್ತಿಯ ಏಟಿಗೆ ಎದುರು ಹೋಗುವವರನ್ನು ಕಾಣೆನು; ಅವನು ಕಾಲರೂಪನು; ಕೈಸೆರೆ ಸಿಕ್ಕುವವನಲ್ಲ; ಅವನಿಗೆ ದೈವಬಲವಿರುವುದು,"

ಎಂದು ಮುಂತಾಗಿ ಹೇಳಲು ಸುಲ್ತಾನನು, ಇನ್ನೊಂದು ಬಾರಿ ನೋಡಿಕೊಳ್ಳೋಣ, ಎಂದು ಸಮಾಧಾನ ಮಾಡಿ ಅವನನ್ನು ಮನೆಗೆ ಕಳುಹಿಸಿದನು

* * *

೧೩

ಮರು ದಿವಸ ಕಂಪಿಲರಾಯನು ರಾಮಯ್ಯನ ಸಹಿತವಾಗಿ ಬಂದು ಸಭೆಯನ್ನು ನಡೆಸಿದನು. ಆ ಸಭೆಗೆ ಯುದ್ಧದಲ್ಲಿ ಕಡಿದಾಡಿದ ಸಮಸ್ತರನ್ನೂ ಕರೆಸಿದನು. ಎಲ್ಲರೂ ಬಂದು ರಾಯನಿಗೆ ವಂದಿಸಿ ಉಚಿತ ಸ್ಥಳಗಳಲ್ಲಿ ಕುಳಿತುಕೊಂಡರು. ಕಂಪಿಲರಾಯನು ಮಂತ್ರಿ ಬೈಚಪ್ಪನಿಗೆ ಅಪ್ಪಣೆ ಮಾಡಿ ದಿವ್ಯವಾದ ವಸ್ತ್ರಾಭರಣಗಳನ್ನು ತರಿಸಿ ರಾಮನ ಬಳಿ ಇಡಿಸಿದನು. ರಾಮಯ್ಯನು ಯುದ್ಧದಲ್ಲಿ ಸಾಹಸ ಕಾರ್ಯಗಳನ್ನು ಮಾಡಿದ ರಾಜ ಕುಮಾರರನ್ನು ಕರೆದು ಅವರಿಗೆ ಮುರುಡಿ, ಸರಪಳಿ, ಪದಕಗಳು ಮೊದಲಾ ದವುಗಳನ್ನೂ, ಬಿರುದು ಬಾವಲಿಗಳನ್ನೂ ಮಂದಿ ಮಕ್ಕಳಿಗೆ ಹೊನ್ನುಗಳನ್ನೂ ಬಣ್ಣದ ಉಡುಗೊರೆಗಳನ್ನೂ ಕೊಟ್ಟು ಮನ್ನಿಸಿದನು. ನಾಯಕವಾಡಿಗಳಿಗೆ ಅವರವರ ಯೋಗ್ಯತೆಗೆ ತಕ್ಕ ಒಡವೆಗಳನ್ನೂ ಜೋಳಿಗೆ ಹೊನ್ನನ್ನೂ ಕೊಟ್ಟು ಎಲ್ಲರಿಗೂ ವೀಳೆಯವನ್ನು ಕೊಟ್ಟು ಗಾಯಗೊಂಡವರಿಗೆ ಔಷಧೋಪಚಾರ ಗಳಿಗೆ ಏರ್ಪಡಿಸಿ, ಸಮಸ್ತರನ್ನೂ ಸಮಾಧಾನ ಮಾಡಿ ಕಳುಹಿಸಿದನು,

* * *

ಇತ್ತ, ನೇಮಿಖಾನನು ಬರೆದ ಕಾಗದವನ್ನು ಚಾರರು ಬಲ್ಲಾಳರಾಯ ನಿಗೆ ಮುಟ್ಟಿಸಿದರು. ಅದನ್ನು ಬಲ್ಲಾಳರಾಜನು ಓದಿಕೊಂಡು ಚಾರರನ್ನು ಹಿಂದಕ್ಕೆ ಕಳುಹಿಸಿ, ಮಂತ್ರಿಯೊಡನೆ ಆಲೋಚನೆ ಮಾಡಿ ಖಚಿತವಾದ ವರ್ತಮಾನವನ್ನು ತರಲು ಮಂತ್ರಿ ನರಸಿಂಗರಾಯನನ್ನು ಓರಗಲ್ಲಿಗೆ ಕಳುಹಿಸಿ ದನು. ನರಸಿಂಗರಾಯನು ಓರಗಲ್ಲಿಗೆ ಬಂದು ಅಲ್ಲಲ್ಲಿ ವಿಚಾರಿಸಿ, ನಿಜವಾದ ಸಂಗತಿಯನ್ನು ತಿಳಿದು ಬಂದು ರಾಜನಿಗೆ ಹೀಗೆ ವರದಿ ಮಾಡಿದನು,

"ಕಂಪಿಲರಾಯನ ಮಗನಾದ ರಾಮನು, ಗರ್ವದಿಂದ ಉಬ್ಬಿ ಹೋಗಿ ದಕ್ಷಿಣ ದೇಶದ ರಾಜರುಗಳ ಬಿರುದನ್ನು ಧರಿಸಿದವನು. ಈ ರಾಮನು ಹಿಂದೆ ಓರಗಲ್ಲಿಗೆ ಹೋಗಿ ತನ್ನ ತಂದೆಯೊಡನೆ ಮುನಿಸಿಕೊಂಡು ಬಂದಿರುವು ದಾಗಿಯೂ ಆ ರಾಜನನ್ನು ಓಡಿಸಲು ಬಂದಿರುವುದಾಗಿಯೂ ಹೇಳಿಕೊಂಡು

ನಗರದ ಒಳಹೊಕ್ಕು, ಇಲ್ಲದ ತಂಟೆಯನ್ನು ಮಾಡಿ, ಆಶ್ರಯ ಕೊಟ್ಟ ಅವರ ಮಂದಿ ಮಾರ್ಬಲವನ್ನು ಕೊಂದು, ಮೋಸದಿಂದ ಬೊಲ್ಲನನ್ನು ಅಪಹರಿಸಿ ಕೊಂಡು ಹೋದನು.

ಬೊಲ್ಲನನ್ನು ಗೆದ್ದು ತಂದೆನೆಂಬ ಗರ್ವದಿಂದ ರಾಮನು ಹುಳಿಯಾರ ಕೋಟೆಯನ್ನು ಮುತ್ತಿ ಮಾರಗೊಂಡನನ್ನು ಸೋಲಿಸಿದನು. ಮಾರ ಗೊಂಡನು ಅಂಜಿಕೆಯಿಂದ ತನ್ನ ಪಂಜರದಲ್ಲಿದ್ದ ಅರಗಿಳಿಯನ್ನು ಪಚ್ಚೆಯ ಪದಕವನ್ನು ಕೊಟ್ಟು ರಾಜಿ ಮಾಡಿಕೊಂಡನು.

ಜಗದಪ್ಪರಾಯನು ರಾಮನಿಗೆ ಅಂಜಿ ತನ್ನ ಮಗಳನ್ನು ಕೊಟ್ಟು ವಿವಾಹ ಮಾಡಿದನು. ಪೊಗದಿಯನ್ನು ತರಲು ದಿಳ್ಳಿಯ ಪಾಚ್ಛಾನು ಕಳುಹಿಸಿದ ಸೇವಕರ ತಂಡವನ್ನು ಮುರಿದು ಹಾವುಗೆಯನ್ನು ಮೆಟ್ಟಿದನು. ಸಿಟ್ಟುಗೊಂಡ ದಿಳ್ಳಿಯ ಬಾದಶಹನು ಕಳುಹಿಸಿದ. ನೇಮಿಯನ್ನು ಯುದ್ಧದಲ್ಲಿ ಸೋಲಿಸಿ ಹಿಮ್ಮೆಟ್ಟಿಸಿದನು. ರಾಮನು ರಾಜ್ಯವನ್ನು ಸುತ್ತಲೂ ವಿಸ್ತರಿಸಿದನು. ಈಶ್ವರನ ಒಲುಮೆಯಿಂದ ರಾಮನು ಬಲ್ಲಿದನಾಗಿರುವನು. ಅವನೊಡನೆ ಸೆಣಸುವವರು ಯಾರೂ ಇಲ್ಲ.

ಎಂದು ಮಂತ್ರಿ ನರಸಿಂಗರಾಯನು ನುಡಿದುದನ್ನು ರಾಯನು ಕೇಳಿ ಕಡು ಕೋಪ ಹೊಂದಿದನು.

"ರಾಮನನ್ನು ಇನ್ನು ಸುಮ್ಮನೆ ಬಿಡುವುದಕ್ಕಾಗುವುದಿಲ್ಲ, ಅವನ ಗರ್ವವನ್ನು ಮುರಿದು, ಕುಮ್ಮಟ ದುರ್ಗವನ್ನು ಹಾಳು ಮಾಡುವೆನು" ಎಂದು ಹೇಳುತ್ತಾ ತನ್ನ ಸಹಾಯಕ್ಕೆ ಬರುವಂತೆ ನೆರೆಹೊರೆಯ ರಾಜರಿಗೆ ಓಲೆಗಳನ್ನು ಬರೆಸಿ ಉಡುಗೊರೆ ಸಹಿತ ಚಾರರನ್ನು ಕಳುಹಿಸಿದನು. ಬಲ್ಲಾಳರಾಯನ ಚಾರರು ತಂದ ಓಲೆಯನ್ನು ಓದಿಕೊಂಡು, ರಾಜರುಗಳು ತಮ್ಮ ಅನುಕೂಲತೆಗೆ ತಕ್ಕಂತೆ ದಂಡಾಳುಗಳನ್ನೂ ಕುದುರೆಗಳನ್ನೂ, ಕಳು ಹಿಸಿದರು. ಚಪ್ಪಗಿರಿಯಿಂದ ಮೊಗಲನು ಎಪ್ಪತ್ತು ಸಾವಿರ ಕುದುರೆಗಳನ್ನು ಮತ್ತು ಏಳುನೂರು ದಂಡಿನೊಡನೆ ಬಲ್ಲಾಳನ ಸಹಾಯಕ್ಕೆ ಬಂದನು. ಲಾಟ ಮಾಳವ ರಾಜರೂ ಮತ್ತು ಇತರ ಪಾಳೆಯಗಾರರು ತಮ್ಮ ಸೈನ್ಯ ಗಳನ್ನು ಕಳುಹಿಸಿದರು. ಮಲೆಯಾಳ ಮತ್ತು ಕೊಂಕಣ ದೇಶದವರು ಹತ್ತು ಸಾವಿರ ಬಲ ಮತ್ತು ಒಂದು ಸಾವಿರ ಕುದುರೆಯನ್ನು ಕಳುಹಿಸಿದರು. ಪ್ರತಾಪರುದ್ರರಾಯನು ಮುಂಗುಲಿರಾಯನಿಗೆ ಹೇಳಿಕಳುಹಿಸಿ ಅವನ ಮಗ

ಸಿಂಗರಾಯನನ್ನು ಕರೆಸಿಕೊಂಡನು. ತನ್ನ ಅರವತ್ತು ಸಾವಿರ ಕುದುರೆ ಗುರಿಕಾರರು, ಬಿರುದಿನ ಯಕ್ಕಟಿಗರು ಸಿಂಗರಾಯನ ಮುನ್ನೂತ್ತು ಸಾವಿರ ದಂಡು ಸಹಿತವಾಗಿ ಬಲ್ಲಾಳನೆಡೆಗೆ ಬಂದರು.

"ಕುಮ್ಮಟ ದುರ್ಗಕ್ಕೆ ನಾಳೆಯೇ ಪ್ರಯಾಣ ಹೊರಟು ದುರ್ಗಕ್ಕೆ ಧಾಳಿಯನ್ನಿಟ್ಟು ಅವನನ್ನು ಕೋಳು ಹಿಡಿಯಬೇಕು," ಎಂದು ಮೊಗಲ ನಜೀರನು ಹೇಳಲು ರುದ್ರರಾಯನು,

"ಆ ರೀತಿ ಆಗದು; ನೇಮೀಖಾನನೇ ತನ್ನ ಬಲವಾದ ಸೈನ್ಯದಿಂದ ಕುಮ್ಮಟ ದುರ್ಗದ ಕಲ್ಲಿನಲ್ಲಿ ಸಿಕ್ಕಿಕೊಂಡು ನಗೆಗೀಡಾಗಿ ಓಡಿಹೋದನು" ಎಂದುತ್ತರವಿತ್ತನು.

"ಕಂಪಿಲ ರಾಯನ ಸೀಮೆಯ ಒಂದು ದೊಡ್ಡಕೋಟೆಯನ್ನು ನಾವು ಮುತ್ತಿಕೊಂಡರೆ ರಾಮನು ತಾನಾಗಿಯೇ ಅಲ್ಲಿಗೆ ಬರುವನು. ಆಗ ನಾವು ಮುತ್ತಿಕೊಂಡು, ಅವನ ಸೈನ್ಯವನ್ನು ತುಂಡು ತುಂಡಾಗಿ ಖಂಡಿಸಿ ರಾಮುನನ್ನು ಕೈಸೆರೆ ಹಿಡಿದು ದಿಳ್ಳಿಗೆ ಕಳುಹಿಸೋಣ. ಅನಂತರ ಕುಮ್ಮಟ ದುರ್ಗವು ನಮ್ಮ ಕೈಗೆ ಸುಲಭವಾಗಿ ಸಿಗುವುದು" ಎಂದು ಬಲ್ಲಾಳನು ನುಡಿದನು. ಅದನ್ನು ಎಲ್ಲರೂ ಅನುಮೋದಿಸಿದರು.

ದಂಡು ಕೂಚುಮಾಡಿ ಗಡಿ ದುರ್ಗಕ್ಕೆ ಮುತ್ತಿಗೆಯನ್ನು ಹಾಕಿದರು. ನಾಲ್ಕು ದಿಕ್ಕಿನಲ್ಲಿಯೂ, ಕೋಟೆಯನ್ನು ಮುತ್ತಿ, ರಾಮನು ಬರುವ ದಾರಿಯಲ್ಲಿ ಅವನ ಸೀಮೆಗೆ ಧಾಳಿಯಿಟ್ಟು ಕೆಲವು ಗ್ರಾಮಗಳನ್ನು ಸುಡುತ್ತಾ ಕೆಲವು ಗ್ರಾಮಗಳನ್ನು ತಮ್ಮ ಕೈವಶ ಮಾಡಿಕೊಳ್ಳುತ್ತಾ ಧಾಮ ಧೂಮ ಮಾಡಿದರು. ಕೋಟೆಯಲ್ಲಿದ್ದ ಕಾಟನಾಯ್ಕನು ರಾಮನಿಗೆ ಸುದ್ದಿಯನ್ನು ತಿಳಿಸುವಂತೆ ತಳವಾರನನ್ನು ಕಳುಹಿಸಿದನು. ಚಾರರು ಓಡಿಹೋಗಿ ರಾಮಯ್ಯನ ಬಳಿಗೆ ಬಂದು ಕೈಮುಗಿದು ಅಡ್ಡಬಿದ್ದು ಸುದ್ದಿಯನ್ನು ಅರುಹಿದರು.

"ಬಲ್ಲಾಳ ರಾಯನು, ಮೊಗಲನೂ ಸೈನ್ಯ ಸಮೇತರಾಗಿ ಸುತ್ತಣ ರಾಯರನ್ನು ಕೂಡಿಕೊಂಡು ನಮ್ಮ ಸೀಮೆಯನ್ನು ಹೊಕ್ಕರು. ನಾಡನ್ನೆಲ್ಲಾ ಸುಡುತ್ತಾ ಗಡಿದುರ್ಗವನ್ನು ಹಿಡಿದರು. ದುರ್ಗದ ಸುತ್ತಲೂ ಎತ್ತನೋಡಿದರೂ ಅವರ ದಂಡೇ ಮುತ್ತಿಕೊಂಡಿರುವುದು. ಕತ್ತಲಲ್ಲಿ ತಪ್ಪಿಸಿಕೊಂಡು ಬಂದಿರುವೆನು. ನಮ್ಮ ಬಿನ್ನಪವನ್ನು ಲಾಲಿಸು ಎನ್ನೊಡೆಯ"

ಈ ಸುದ್ದಿಯನ್ನು ರಾಮಯ್ಯನು ಕೇಳಿ ಮರು ದಿನವೇ ಸೈನ್ಯಸಮೇತ

ನಾಗಿ ಪ್ರಯಾಣ ಮಾಡುವುದಾಗಿ ಅವರ ಸಂಗಡ ಹೇಳಿ ಅವರಿಗೆ ಊಟ ಮಾಡಿಸಿ ಕಳುಹಿಸಿದನು.

ಅಂದು ಮಾನ್ಯೆಯರ ಸಭೆಯೊಂದು ನೆರವೇರುವಂತೆ ನಗಾರಿಯನ್ನು ಹೊಡೆಯಿಸಿ ತನ್ನರಮನೆಗೆ ಹೋದನು.

ರಾಮನು ತಾಯಿ ಹರಿಯಲಾ ದೇವಿಯ ಬಳಿಗೆ ನಡೆದು, ಗಡಿದುರ್ಗ ವನ್ನು ಮುತ್ತಿರುವ ಬಲ್ಲಾಳನೊಡನೆ ಯುದ್ಧಮಾಡಲು ಪ್ರಯಾಣ ಮಾಡು ವುದಾಗಿ ತಿಳಿಸಿದನು. ಕಂಪಿಲರಾಯನು ರತ್ನಾಜಿಯ ಅರಮನೆಯನು ಬಿಟ್ಟು ಚಿಕ್ಕರಮನೆಯಲ್ಲಿದ್ದ ಹರಿಯಲಾ ದೇವಿಯ ಬಳಿಗೆ ಬಂದನು. ಅಲ್ಲಿಗೆ ಬಂದ ತಂದೆಯ ಪಾದಕ್ಕೆ ರಾಮಯ್ಯನು ನಮಸ್ಕಾರ ಮಾಡಿ,

"ಬಲ್ಲಾಳರಾಯ ಮೊಗಲ ಸರದಾರ, ಮುಂಗುಲಿಯ ಸಿಂಗರಾಯ, ಓರಗಲ್ಲಿನ ಅರಸು ಮುಂತಾದವರು ಒಟ್ಟುಗೂಡಿ ಮಾತಾಡಿಕೊಂಡು ನಮ್ಮ ದುರ್ಗದ ಕೋಟೆಯನ್ನು ಮುತ್ತಿರುವರು, ಎಂದು ತಂದೆಗೆ ತಿಳಿಸಿದನು.

ಮಂತ್ರಿ ಬೈಚಪ್ಪನನ್ನೂ, ಮಂಚಣ, ಚಾರಾಮುರಾಯರ ಮಕ್ಕಳನ್ನು, ಅರಸುಕುಮಾರರು, ಹಂಪರಾಜ, ಕಂಪರಾಜ, ಹಿರಿಯ ಕುಮಾರಕಾಟಣ್ಣ ಮುಂತಾದವರನ್ನೂ ಕರೆಸಿಕೊಂಡನು. ನೇಮಿಯ ಅಪ್ಪಣೆಯಿಂದ ನಾಡ ದೊರೆಗಳೆಲ್ಲ ಮೊಗೆಲಸರದಾರರೊಡನೆ ದಂಡೆತ್ತಿಬಂದು ಗಡಿದುರ್ಗಕ್ಕೆ ಹಾಕಿದ ವಿಷಯವನ್ನು ತಿಳಿಸಿ ರಾಮುಯ್ಯನು ಚಾವಡಿಗೆ ಬಂದನು. ಬೊಲ್ಲನನ್ನೂ ಮಾನ್ಯೆಯರನ್ನೂ ಕರೆದುಕೊಂಡು ಪ್ರಯಾಣ ಮಾಡಿದ. ಎರಡನೆಯ ದಿನ ರಾಮೇಶನ ಗುಡಿಗೆ ಹೋಗಿ ದೇವರನ್ನು ಪ್ರಾರ್ಥಿಸಿ ಹೊನ್ನು ಕಾಣಿಕೆಯನ್ನು ಇಟ್ಟು ಮುಂದಕ್ಕೆ ಪ್ರಯಾಣ ಮಾಡಿದನು. ದಂಡನ್ನೆಲ್ಲಾ ಲೆಕ್ಕಮಾಡಲಾಗಿ ಎಪ್ಪತ್ತು ಸಾವಿರ ಕಾಲಾಳುಗಳೂ, ಎಪ್ಪತ್ತು ಸಾವಿರ ಕುದುರೆಯೂ ಆಯಿತು. ಮದಗಜದ ಹಿಂಡು ಹಿಂದೆ ಬರುತ್ತಿತ್ತು. ಮಾರನೆಯ ದಿವಸ ರಾಮಯ್ಯನು ಬೊಲ್ಲನನ್ನು ಏರಿ ಪ್ರಯಾಣಮಾಡಿದನು. ಎಡಬಲದಲ್ಲಿ ಮಾನ್ಯೆಯರ ಕುದುರೆಯ ಫೌಜು ಬರುತ್ತಾ ಇತ್ತು. ಹೀಗೆ ನಡೆದು ತಿರುಪಳ್ಳಿ ಯನ್ನು ಸೇರಿ ಕಾಟಣ್ಣನಿಗೆ ಒಂದು ದಂಡನ್ನೇರ್ಪಡಿಸಿ ಉಳಿದ ತನ್ನ ಸೈನ ವನ್ನೆಲ್ಲಾ ನಾಲ್ಕು ಭಾಗ ಮಾಡಿ ಮುಂದಕ್ಕೆ ನಡೆದನು. ಮಾರನೆಯ ದಿವಸ ನರಗುಂದದ ಹೊಳೆಯ ಬಳಿ ಬಂದಿಳಿದನು.

ಆ ದಿನವೇ ಕಳ್ಳಭಂಟರನ್ನು ಕರೆಸಿ ಗಡಿ ದುರ್ಗಕ್ಕೆ ಹೋಗಿ ಅಲ್ಲಿಯ

ಸುದ್ದಿಯನ್ನು ಬೇಗನೆ ತರುವಂತೆ ಅಪ್ಪಣೆಮಾಡಿದನು. ಅಲ್ಲಿಂದ ನಾಲ್ಕಾರು ದಿನ ಪ್ರಯಾಣಮಾಡಿ ಮನುವಳ್ಳಿಗೆ ಬಂದು ತಲುಪಿ, ಅಲ್ಲಿ ರಾಮಯ್ಯನು ಸೈನ್ಯಾಧಿಪತಿಗಳನ್ನೆಲ್ಲಾ ಕರೆಸಿ ಗುಪ್ತಾಲೋಚನೆ ಮಾಡಿ ಮಾರನೆಯ ದಿವಸ ಬೆಳಗ್ಗೆ ಶತ್ರುಗಳ ಮೇಲೆ ಬಿದ್ದು ಮುತ್ತಿಗೆ ಎಬ್ಬಿಸಬೇಕೆಂದು ನಿರ್ಧರಿಸಿದನು. ಮಾರನೆಯ ದಿನ ಉದಯ ಕಾಲದಲ್ಲಿಯೇ ಸದರದ ಡೇರೆಯಲ್ಲಿ ಸಭೆ ಮಾಡಿದನು. ನಾಲ್ಕುಭಾಗ ಮಾಡಿದ್ದ ರಾಮಯ್ಯ ಚತುರಂಗ ಬಲವನ್ನು ಬಲದಲ್ಲಿ ಬಾದೂರ ಖಾನನೂ, ಎಡದಲ್ಲಿ ಕಾಟಣ್ಣನೂ, ಹಿಂದೆ ಚಾರಾಮರಾಯನ ಮಕ್ಕಳೂ ಮುಂಭಾಗದಲ್ಲಿ ಭೇರಿ ನಗಾರಿಗಳ ಶಬ್ದಮಾಡಿಸುತ್ತಾ ದೇವಯ್ಯನೂ ನಡೆಸಿಕೊಂಡು ಹೋಗುತ್ತಿದ್ದರು.

ಬಲ್ಲಾಳರಾಯನು ರಾಮಯ್ಯನು ಬರುವುದನ್ನು ಕಂಡು ಯುದ್ಧಕ್ಕೆ ಸಿದ್ಧನಾಗಿ ಈ ದಿವಸ ರಾಮುನನ್ನು ಕೈಸೆರೆ ಹಿಡಿಸುವೆನು ಎಂದು ರುದ್ರರಾಯನ ಮುಂದೆ ಪ್ರತಾಪ ಕೊಚ್ಚುತ್ತಿದ್ದನು. ಅಷ್ಟರಲ್ಲಿಯೇ ಕತ್ತಲು ಮುಸುಕಿದಂತಾಯಿತು. ಬಲ್ಲಾಳರಾಯನ ಕಡೆಯವರು ತಮ್ಮತಮ್ಮೊಳಗೆ ತತ್ತರಗೊಳ್ಳುತ್ತಿದ್ದರು. ರಾಮುನ ಎಡಬಲದಲ್ಲಿ ಚಾರಾಮರಾಯನ ಮಕ್ಕಳು ಯುದ್ಧಮಾಡುತ್ತಾ ಶತ್ರುಗಳ ತಲೆಗಳನ್ನು ತರಿದಿಟ್ಟು ಗಗನಕ್ಕೆ ತೂರುತ್ತಾ ತಮ್ಮ ಸಾಹಸವನ್ನು ತೋರಿಸುತ್ತಿದ್ದರು.

ಕೋಟೆಯಲ್ಲಿದ್ದ ಕಾಟನಾಯಕನು ಶತ್ರುಗಳ ದಂಡಿನ ಮೇಲೆ ಹೊರಟು ಲೂಟಿಮಾಡಿ ಶತ್ರುಗಳ ತಲೆಯನ್ನು ತರಿದು ಈಡಾಡಿ ಶತ್ರುಗಳನ್ನು ಒತ್ತುತ್ತಾ ರಾಮಯ್ಯನ ಬಳಿಗೆ ಬರುತ್ತಿದ್ದನು.

ಇತ್ತಲಾಗಿ ರಾಮಯ್ಯನೂ ಅವನ ಕಡೆಯವರೂ ತೆರವಿಲ್ಲದಂತೆ ಬಲ್ಲಾಳನ ದಂಡನ್ನು ಕಡಿದು ಮುಂದಕ್ಕೆ ನುಗ್ಗುತ್ತಿದ್ದರು. ರಾಮಯ್ಯನು ಬೊಲ್ಲನನ್ನು ಏರಿ ಮಿಾಟ ಪರಬಲವನ್ನು ತನ್ನ ಪಡೆ ಸಹಿತ ಹೊಕ್ಕು ತಡೆಯಿಲ್ಲದೆ ಶತ್ರುಗಳ ಶಿರಚ್ಛೇದನ ಮಾಡುತ್ತಿದ್ದನು.

ಇನ್ನೊಂದು ಭಾಗದಲ್ಲಿ ಯುದ್ಧ ಮಾಡುತ್ತಿದ್ದ ಬಾದೂರ ಖಾನನಿಗೆ ಅಂಬು ತಗುಲಿ ಗಾಯವಾಗಲು ಅವನ ದಳವು ಮುರಿದು ಹಿಂದಕ್ಕೆ ಬರುವುದನ್ನು ರಾಮಯ್ಯನು ಕಂಡು ಬೊಲ್ಲನನ್ನು ಏರಿ ಆರ್ಭಟಮಾಡುತ್ತಾ ಬಾದೂರ ಖಾನನ ನೆರವಿಗೆ ಬಂದನು, ಸಂದೇಹದಿಂದ ಹಿಂದಕ್ಕೆ ಬರುತ್ತಿದ್ದ ಮಂದಿಯನ್ನು ಸಮಾಧಾನಪಡಿಸುತ್ತಾ ಮುಂದಕ್ಕೆ ನುಗ್ಗಿ ಪರಬಲವನ್ನು ಹೊಕ್ಕನು.

ಆನೆಯ ಮೇಲೆ ಕುಳಿತಿದ್ದ ಬಿಸ್ಮಿಲ್ಲಾಖಾನನು ರಕ್ಕಸ ಮಾದನನ್ನು ಹೊಡೆದ 'ಹೆಸರಾದ ದೊರೆ'ಯೆಂದು ಮೂದಲಿಸುತ್ತಾ ರಾಮಯ್ಯನ ಮೇಲೆ ನುಗ್ಗಿದನು. ಮಸೆದ ಅಲಗಿನ ಕತ್ತಿಯಿಂದ ಮಹಾ ಬಿರುದಾಂಕಿತನಾದ ರಾಮಯ್ಯನನ್ನು ಹೊಡೆಯಲು ರಾಮಯ್ಯನು ಆ ಪೆಟ್ಟನ್ನು ತಪ್ಪಿಸಿಕೊಂಡು ಬಿಸ್ಮಿಲ್ಲಾಖಾನನ ನೆತ್ತಿಗೆ ತಗಲುವಂತೆ ಜಡಿಯಲು ಆ ಪೆಟ್ಟಿಗೆ ಬಿಸ್ಮಿಲ್ಲಾಖಾನನು ಕೆಳಕ್ಕೆ ಬಿದ್ದನು. ಅವನೇರಿದ್ದ ಆನೆಯು ಮಲಗಿತು. ಶಬರರು ಅದರ ತಲೆಯನ್ನು ಹೊಡೆದರು. ಬಿಸ್ಮಿಲ್ಲಾಖಾನನು ಸತ್ತುದನ್ನು ಕಂಡು ಅವನ ಕಡೆಯ ತುರುಕರನ್ನೆಲ್ಲಾ ರಾಮಯ್ಯನು ಒತ್ತಿ ಕಡಿದು ಹಿಂದಕ್ಕೆ ಓಡಿಸಿ ಎಡಬಲಕ್ಕೆ ತಿರುಗಿದನು.

ಮೊಗಲ ವಜೀರನು ಬಿದ್ದುದನ್ನು ಕಂಡು ರುದ್ರರಾಯನು ರಾಮನ ಬೇಡರ ಮೇಲೆ ಬಿದ್ದು ಕಡಿದಾಡಿದನು. ರುದ್ರರಾಯನು ಗೆದ್ದೆನೆಂದು ಕೂಗಿಕೊಳ್ಳುತ್ತಿರಲು ಅವನನ್ನು ಹಿಂದುಮುಂದು ಚಾರಾಮರಾಯನ ಮಕ್ಕಳು ಮುತ್ತಿಕೊಂಡರು. ಈ ಕಾಳಗದಲ್ಲಿ ರಾಮನ ಕಡೆಯವರು ಹಲವರು ಮಡಿದರು. ಇದನ್ನು ಎಡಭಾಗದಲ್ಲಿ ಬರುತ್ತಿದ್ದ ಕಾಟಣ್ಣನು ನೋಡಿ ಪ್ರತಾಪರುದ್ರನ ಮೇಲೆ ಎರಗಿ ಕತ್ತಿಯಿಂದ ಹೊಡೆಯಲು ಆ ರಾಯನು ಗಾಯಗೊಂಡು ಹಿಮ್ಮೆಟ್ಟಿದನು. ಅವನೊಡನೆ ಶಿಂಗನ ದಂಡು ಮುರಿದೋಡಿತು.

ಈ ರೀತಿಯಲ್ಲಿ ಮೂಡಣ ದೊರೆಗಳು ತಮ್ಮ ಪಟ್ಟಣಕ್ಕೆ ನಡೆದರು ಮೊಗಲರ ಸೈನ್ಯದಲ್ಲಿ ಹತ್ತು ಸಾವಿರ ಜನಗಳು ಮಡಿದರು.

ಇತ್ತಲಾಗಿ ಬಲ್ಲಾಳರಾಯನು ರಾಮನ ಮೇಲೆ ಏರಿ ಬರಲು ಭಾರಿ ಕಾಳಗ ನಡೆಯಿತು. ರಕ್ತದ ಕಾಲುವೆ ಹರಿಯುವಂತೆ ಕಡಿದಾಡಿದರು. ಈ ಹೊತ್ತಿಗೆ ಮೊಗಲ ಸರದಾರನ ಸೈನ್ಯ ಮೆಲ್ಲಗೆ ರಾಮನ ಪಡೆಯ ಏಟಿಗೆ ತಡೆಯಲಾರದೆ ಹಿಮ್ಮೆಟ್ಟಿತು. ಆದರೂ ರಾಮನ ಕಡೆಯವರು ಅವರನ್ನು ಬಿಡದೆ ಬೆನ್ನುಹತ್ತಿದರು. ಬಾದೂರಖಾನನೂ, ಕಾಟಣ್ಣನೂ, ಇತರ ಮಾನ್ಯರೂ, ಜಯವನ್ನು ಹೊಂದಿ ರಾಮನ ಬಳಿಗೆ ಬಂದರು. ಒಡೆಯನನ್ನು ಕಳೆದುಕೊಂಡು ಮೊಗಲರು ತಮ್ಮ ಊರಿಗೆ ನಡೆದರು. ರುದ್ರರಾಯ ಗಾಯಹೊಂದಿ ಸಿಂಗಯ್ಯನೊಂದಿಗೆ ತನ್ನ ಊರಿಗೆ ಹೋದನು. ಸುತ್ತಲೂ ಮೂರು ಹರಿದಾರಿಯಲ್ಲಿ ಹೆಣಗಳು ಬಿದ್ದಿದ್ದುವು. ಮರುಳು ಭೂತದ ಹಿಂಡು ಕಾತುರದಿಂದ ಹೆಣಗಳನ್ನು ಉಂಡು ತಣಿದು,

"ರಾಮಯ್ಯಾ, ನೀನೇ ಧರಣೀಶನಹುದೋ! ಸ್ಥಿರವಾಗಿ ಬಾಳು

ಶತೃಗಳನ್ನು ಕೊಂದು ನಮಗೆ ತೃಪ್ತಿಯನ್ನು ಮಾಡುತ್ತಿರು ! ನೀನೇ ವೀರ ! ಧೀರ !! ಸ್ಥಿರವಾಗಿ ಬಾಳು !!!" ಎಂದು ಆ ಭೂತಗಳ ಹಿಂಡು ಕೊಂಡಾಡುತ್ತಿದ್ದಿತು. ರಾಮಯ್ಯನು ಧರ್ಮಗಹಳೆಯನ್ನು ಹಿಡಿಸಿದನು. ಓಡಿಹೋಗುತ್ತಿದ್ದ ಬಲ್ಲಾಳ ದಂಡನ್ನು ಹಿಂಬಾಲಿಸಿ ಹೋಗಿ ಹಾನಗಲ್ಲ ಬಳಿ ಬಂದು ಬೀಡುಬಿಟ್ಟನು.

## ೧೪

ಬಲ್ಲಾಳನೊಡನೆ ಯುದ್ಧ ಮುಗಿದ ನಂತರ ಕಂಪಿಲರಾಯನು ಬೇಟೆಯಾಡುವುದಕ್ಕಾಗಿ ಮಂದಿ ಮಾರ್ಬಲದೊಡನೆ ಹಾಗೆಯೇ ಹೊರಟನು. ಕುಮಾರ ರಾಮನಿಗೆ ಬೇಟೆಯಾಟವು ಸವಿಯುಂಟಾಗಲಿಲ್ಲವಾದ್ದರಿಂದ ತಂದೆಯೊಡನೆ ಹೋಗದೆ ಊರಿಗೆ ಹಿಂದಿರುಗಿದನು. ಊರಿನಲ್ಲಿದ್ದ ಹರಿಗೋಲುಗಳನ್ನೆಲ್ಲಾ ತರಿಸಿ ಹಂಪೆಯ ಹೊಳೆಯಲ್ಲಿ ನೀರಾಟವಾಡಲು ತನ್ನ ಸಂಗಾತಿಗಳನ್ನೆಲ್ಲಾ ಕರೆದುಕೊಂಡು ಬಂದನು. ಎಲ್ಲರೂ ನೀರಾಟಕ್ಕೆ ತೆರಳಿದರು.

ಹರಿಗೋಲುಗಳನ್ನೂ ಹೊಳೆಯಲ್ಲಿ ತೇಲಿಬಿಟ್ಟು, ರಾಮಯ್ಯನೂ ಕಾಟಣ್ಣನೂ ಒಂದೊಂದು ಹರಿಗೋಲನ್ನು ಏರಿದರು. ಉಳಿದವರು ಒಂದೊಂದು ಹರಿಗೋಲನ್ನೇರಿ ನೀರನ್ನು ಚಲ್ಲುತ್ತಾ ನದಿಯಲ್ಲಿ ತೇಲುತ್ತಾ ರಾಮನ ಹರಿಗೋಲನ್ನು ಎಲ್ಲರೂ ಸುತ್ತುಗಟ್ಟಿದರು. ಕಾಟಣ್ಣನೂ ಅವನ ಪರಿವಾರದವರೂ ರಾಮನನ್ನು ಸುತ್ತುಗಟ್ಟಿ ರಾಮಯ್ಯನ ಮೇಲೆ ಎಲ್ಲರೂ ನೀರೆರೆಚುತ್ತಿದ್ದರು. ರಾಮನಾಥನು ಬೆಳ್ಳಿಯ ಕೊಳವೆಗಳಲ್ಲಿ ನೀರನ್ನು ತುಂಬಿ ತನ್ನ ಸುತ್ತಿದ್ದ ಮಾನ್ಯೆಯರ ಮೇಲೆ ಚಲ್ಲಿದನು.

ಭಾವಸಂಗಮನು ಮುತ್ತಿನ ಬಿಳಿಯ ಕೋಲನ್ನು ಹಿಡಿದುಕೊಂಡು ರಾಮಯ್ಯನನ್ನು ಮುತ್ತಿಕೊಂಡು ನೀರನ್ನು ಚೆಲ್ಲುತ್ತಿದ್ದನು. ರಾಮನು ಭಾವನ ಹತ್ತಿರಕ್ಕೆ ತನ್ನ ಹರಿಗೋಲನ್ನು ಸರಿಸಿ ಅವನ ಮೇಲೆ ತನ್ನ ಬೆಳ್ಳಿಯ ಕೊಳವೆಗಳಿಂದ ನೀರನ್ನು ಎಸೆದನು. ರಾಮಯ್ಯನು ಮಳೆ ಬಂದಂತೆ ನೀರೆರೆಚುತ್ತಿರಲು ಎಲ್ಲರೂ ಹಿಂದಕ್ಕೆ ಸರಿದರು. ಕಾಟಣ್ಣನೂ ರಾಮಯ್ಯನ ಸಹಾಯಕ್ಕೆ ಬಂದು ಬೀಗರ ಮೇಲೆ ನೀರನ್ನೆರಚಿ

ದನು. ಇದನ್ನು ಕಂಡು ಆರೇರ ಚಾರಾಮರಾಯನ ಮಕ್ಕಳು ನೂರಾರು ಹರಿಗೋಲನ್ನು ನಡೆಸಿಕೊಂಡು ರಾಮಯ್ಯ ಮತ್ತು ಕಾಟಣ್ಣನವರ ಮೇಲೆ ಏರಿಬಂದರು. ಹೀಗೆ ಸಂತಸದಿಂದ ನೀರಾಟವಾಡಿ ಊರಿಗೆ ಹಿಂದಿರುಗಿದರು.

## ೧೫

ಒಂದು ದಿನ ರಾಮನಾಥನು ಉದಯಕಾಲಕ್ಕೆದ್ದು ನಿತ್ಯವಿಧಿಗಳನ್ನು ತೀರಿಸಿದ ನಂತರ ಕಾಟಣ್ಣನು ತನ್ನ ಅರಮನೆಯಿಂದ ಹೊರಟು ರಾಮನಿದ್ದೆಡೆಗೆ ಬಂದು,

'ದಿಕ್ಕು ದಿಕ್ಕಿಗೂ ಹೆಸರಾದ ಮುತ್ತಿನ ಚಂಡು ಹರಿಯಮ್ಮನ ವಶದಲ್ಲಿದೆ. ಅದನ್ನು ನೀನು ತರಬೇಕು. ಸಂತೋಷದಿಂದ ಆಡೋಣ' ಎಂದು ಹೇಳಿದನು. ರಾಮನು ಚಂಡಾಟವಾಡಬೇಕೆಂಬ ಸಂತೋಷದಿಂದ ಆಟಕ್ಕೆ ಶೃಂಗಾರವಾದನು, ನಿಲವುಗನ್ನಡಿಯಲ್ಲಿ ನೋಡಿಕೊಳ್ಳುತ್ತ ಮಾಲೆಯನ್ನೂ, ಸೂರ್ಯಕಿರಣಕ್ಕೆ ಸಮಾನವಾದ ಕಾಂತಿಯುಳ್ಳ ಪದಕವನ್ನೂ ಧರಿಸಿದನು. ಎಳೆಮಿಂಚಿನಂತೆ ಹೊಳೆಯುವ ನೀಲಿಯ ನಾಮವನ್ನಿಟ್ಟು, ತಳತ್ತಳಿಸುವ ಮುಖಕಾಂತಿಯು ರಂಜಿಸುತ್ತಿರಲು, ಪೂರ್ಣಚಂದ್ರನಂತೆ ಒಪ್ಪುತ್ತಿದ್ದನು.

ಮರೆಹೊಕ್ಕವರನ್ನು ಶತೃಗಳಿಗೆ ಬಿಟ್ಟುಕೊಡುವ ರಾಯರ ಗಂಡ, ಧರಣಿಯಲ್ಲಿ ಹೆಸರಾದ ನೇಮಿಯ ಮಿಂಡ, ಖಾನಖಾನ ಮಲ್ಲೂಕರ ಗಂಡ, ಎಂಬ ಬಿರುದಿನ ಮುತ್ತಿನ ಕಡಗವನ್ನು ಧರಿಸಿದನು. ಪರರಾಯರ ಗಂಡನೆಂಬ ರನ್ನದ ಕಡಗವನ್ನು, ಮಾಳವರಾಯರ ಗಂಡನೆಂಬ ನೀಲಕಂಕಣವನ್ನು, ಸಾಳುವರಾಯರ ಗಂಡನೆಂಬ ತೋಳ ಭಾಪುರಿಯನ್ನು, ಕನೋಜಿರಾಯರ ಗಂಡನೆಂಬ ಉಂಗುರವನ್ನು, ಮುಂಗುಲಿರಾಯರ ಗಂಡನೆಂಬ ಮುಂಗೈಸರಪಣಿಯನ್ನು, ಪಡುವಣರಾಯರ ಗಂಡನೆಂಬ ಕಡಗವನ್ನು, ಬಡಗಣರಾಯರ ಗಂಡನೆಂಬ ಕಾಲುಪೆಂಡೆಯವನ್ನು ತೊಟ್ಟನು. ಈ ರೀತಿ ಶೃಂಗಾರವಾದ ರಾಮನನ್ನು ಕಂಡು ಪಟ್ಟದರಸಿ ರಾಮಲದೇವಿಯು ಮುತ್ತಿನಾರತಿಯನ್ನು ತಂದು ಎತ್ತಿದಳು. ಬಳಿಸಾರಿದವರನ್ನು ಕಾಯುವ, ಮುನಿದವರನ್ನು ಕೊಲುವ ರಾಮಾ! ಓರುಗಲ್ಲಿಗೆ ಕೋಳಾಹಳಾ! ವೀರರಾಮನಿಗೆ

ಸರಿಯಿಲ್ಲ ಎಂದು ಕಹಳೆಗಳು ಮೊಳಗುತ್ತಿದ್ದುವು. ರಾಮನು ಕಟ್ಟಿಗೆಯ ಚಾರರನ್ನು ಕರೆಯಿಸಿ, ಚಂಡಿನಾಟಕ್ಕಾಗಿ ಪಟ್ಟಣದಲ್ಲಿರುವ ಮಂತ್ರಿ ಮನ್ನೆಯರು ಶೃಂಗಾರವಾಗಿ ಬರುವಂತೆ ಡಂಗುರವನ್ನು ಹೊಯಿಸಲು ಹೇಳಿದನು. ಚಾರರು ಕೇರಿ ಕೇರಿ ತಿರುಗಿ ರಾಮನು ಚಂಡಾಟವಾಡುವ ವಿಷಯವನ್ನು ತಿಳಿಸಿದರು.

ರಾಮನು ಮುತ್ತಿನಂದಣವನ್ನು ಏರಿ, ತನ್ನ ಐವತ್ತು ಮನ್ನೆಯರೊಡನೆ ತಾಯಿಯ ಅರಮನೆಗೆ ಬಂದನು. ಅರಮನೆಗೆ ಬಂದ ಮಗನನ್ನು ನೋಡಿ, ಸಂತೋಷದಿಂದ ಗಂಧ ಪರಿಮಳ ವೀಳೆಯವನ್ನು ಕೊಟ್ಟು,

"ಶೃಂಗಾರವಾಗಲು ಕಾರಣವೇನು ? ಎಲ್ಲಿಗೆ ಪ್ರಯಾಣ ?" ಎಂದು ಹರಿಯಮ್ಮನು ಮಗನನ್ನು ಕೇಳಿದಳು.

"ಚದುರಂಗ, ಲೆತ್ತ, ಜೂಜುಲಆಡಿದೆನು; ಆದರೂ ಹೊತ್ತು ಕಳೆಯುವುದು ಅಸಾಧ್ಯವಾಯಿತು. ನಿನ್ನ ಬಳಿ ನಮ್ಮ ಮುತ್ತಯ್ಯ ಮುಮ್ಮಡಿಸಿಂಗನು ಆಡಿದ ಮುತ್ತಿನ ಚಂಡು ಇರುವುದಂತೆ, ಅದನ್ನು ಆಡಲು ನನಗೆ ಆಸೆಯಾಗಿದೆ, ಅದನ್ನು ಕೊಟ್ಟು ನಮ್ಮನ್ನು ಕಳಿಸಮ್ಮ" ಎಂದು ರಾಮನು ತಾಯಿಯನ್ನು ಪ್ರಾರ್ಥಿಸಿದನು.

ಈ ಮಾತು ಕೇಳಿದ ತಕ್ಷಣವೇ ಹರಿಯಮ್ಮನಿಗೆ ಸಿಡಿಲು ಬಡಿದಂತಾಯಿತು. "ಮಗನೆ, ಕೆಟ್ಟೆ ಕೆಟ್ಟೆನು! ಮರೆತು ಹೋಗಿದ್ದ ಚಂಡಿನ ವಿಷಯವನ್ನು ನಿನಗೆ ಯಾರು ಹೇಳಿದರು ? ಇದರಿಂದ ನಿನ್ನ ಜೀವಕ್ಕೆ ಹಾನಿಯುಂಟಾಗುವುದು! ಅಯ್ಯೋ! ಏನು ಮಾಡಲಿ ? ಯಾವ ದೇವರನ್ನು ಮೊರೆ ಹೋಗಲಿ ?" ಎಂದು ಹಲುಬಿದಳು.

"ಮುತ್ತಯ್ಯ ಮುಮ್ಮಡಿಸಿಂಗನಾಡಿದ ಚಂಡು, ಶ್ರೀಕೃಷ್ಣನಾಡಿದ ಚಂಡು, ಅಭಿಮನ್ಯುವಾಡಿದ ಚಂಡು, ಇಂತಹ ಚಂಡನ್ನು ಕೊಡಮ್ಮ" ಎಂದು ಅವನು ಪುನಃ ಪ್ರಾರ್ಥಿಸಿದನು.

"ಈ ಚಂಡನ್ನು ಆಡಿ ಮುಮ್ಮಡಿಸಿಂಗನು ಕೆಟ್ಟನು, ಇದರ ಆಟವು ನಿನಗೆ ಬೇಡ, ಈ ಚೆಂಡು ಕೈತಪ್ಪಿ ಕುಮ್ಮಟದಲ್ಲಿರುವ ಚಂದ್ರಮುಖಿಯರ ಕೈಗೆ ಸಿಕ್ಕಿಬಿದ್ದರೆ ನಿನಗೆ ಅಪಕೀರ್ತಿ ಬರುವುದು, ಇಂದು ಚಂಡಿನಾಟವು ಬೇಡ, ಇಂದು ನಿನ್ನ ತಂದೆಯು ಊರಿನಲ್ಲಿಲ್ಲ. ಇನ್ನೊಂದು ದಿನ ನಿನಗೆ ಅದನ್ನು ಕೊಡುವೆನು."

"ಪರಸತಿಯರು ತಂಗಿ ಸಿಂಗಮ್ಮನೋಪಾದಿಯಲ್ಲಿರುವರು, ಅವರನ್ನು ಅಕ್ಕ ಮಾರಮ್ಮನಂತೆ ಕಾಣುವೆನು. ನನ್ನ ಐವರು ಸತಿಯರು ಹೊರತಾಗಿ ಉಳಿದವರನ್ನು ನನ್ನ ಸಹೋದರಿಯರ ಸಮಾನವಾಗಿ ಪರಿಗಣಿಸುತ್ತೇನೆ. ಆದ್ದರಿಂದ ಸಂದೇಹ ಪಡದೆ ಚಂಡನ್ನು ಕೊಡಮ್ಮ"

"ಮಗು ರಾಮ, ಖಂಡಿತವಾಗಿಯೂ ಇಂದು ಚಂಡನ್ನಾಡಬೇಡ. ನಿನ್ನನ್ನು ಕಂಡ ಪರಸತಿಯರು ಮನೆಯ ಕೆಲಸವನ್ನು ಬಿಟ್ಟು ಬಿಡುವರು ತಮ್ಮ ಮಕ್ಕಳಿಗೆ ಮೊಲೆಹಾಲನ್ನು ಉಣಿಸರು, ತಮ್ಮ ಪುರುಷರನ್ನು ಸೇರರು"

"ಪರಸತಿಯರು ನನ್ನ ಹಿರಿಯ ಅಕ್ಕ ಮಾರಮ್ಮನ ಸಮಾನರು, ಅಲ್ಲದೆ ಗುರುವಿನ ಸತಿಯರ ಸಮಾನರು. ಆದ್ದರಿಂದ ಆ ಪ್ರೀತಿಯ ಚಂಡನ್ನು ಕೊಡಮ್ಮಾ" ಹರಿಯಮ್ಮನು ರಾಮನ ಸಂಗಡ ಬಂದಿದ್ದ ಹಿರಿಯರನ್ನು ಕುರಿತು ರಾಮನಿಗೆ ತಕ್ಕ ಬುದ್ಧಿಯನ್ನು ಹೇಳುವಂತೆ ತಿಳಿಸಿದಳು.

"ನಾವು ರಾಮನಿಗೆ ಪರಿಪರಿಯಾಗಿ ಹೇಳಿದೆವು, ಆದರೆ ಕೇಳಲಿಲ್ಲ. ಅವನು ನಮ್ಮ ದೊರೆ, ಹೆಚ್ಚಾಗಿ ಹೇಳಲು ಅಂಜುವೆವು" ಎಂದು ಅವರು ನುಡಿದರು.

"ಕೃತಯುಗದಲ್ಲಿ ಮಾಯಾಂಗದೆಯಿಂದ ಕಾರ್ತವೀರ್ಯನು ಹತನಾದನು, ಯತಿಯ ಶಾಪದಿಂದ ಪತಿಯ ಶಿರವು ಹೋಯಿತು, ಮಕ್ಕಳ ಬಿಲ್ಲನ್ನು ಮುರಿಯಿಸಿತು. ದ್ರೌಪದಿಯು ವನವಾಸವನ್ನು ಹೊಂದಿದಳು. ಕೀಚಕನು ಕೊಲ್ಲಲ್ಪಟ್ಟನು, ಅದೇ ವಿಧಿಯು ಈಗ ಚಂಡಾಡಿ ಮುಮ್ಮಡಿ ಸಿಂಗನನ್ನು ಸೇರಿತು. ಇದು ಆಟವಾಡುವ ಚಂಡಲ್ಲ, ಇಟ್ಟು ಪೂಜಿಸುವ ಚಂಡು. ಆದ್ದರಿಂದ ಈ ಚಂಡಾಟವು ಬೇಡ" ಎಂದು ಪರಿಪರಿಯಾಗಿ ಹರಿಯಾಲದೇವಿಯು ಪುನಃ ಹೇಳಿದಳು.

"ವಿಧಿಯಿಂದ ಎಲ್ಲರೂ ಕೆಟ್ಟರು ಶನಿಯು ಎಲ್ಲಿದ್ದರೂ ಬೆನ್ನು ಬಿಡುವುದಿಲ್ಲ ಚಂಡನ್ನು ಕೊಟ್ಟಹೊರತು ಹೋಗುವುದಿಲ್ಲ" ಎಂದು ರಾಮನು ಹಟ ಮಾಡಿದನು.

"ಓರಂಗಲ್ಲು ಪ್ರತಾಪರುದ್ರ, ಹುಳಿಯಾರು ಮಾರಗೊಂಡ, ಬಲ್ಲಾಳ ರಾಯ ಮೊದಲಾದವರನ್ನು ಗೆದ್ದಿಯಾದುದರಿಂದ ಅವರು ನಿನ್ನ ಮೇಲೆ ರಾಜಕಾರ್ಯ ನಡೆಸಲು ಹೊಂಚುತ್ತಿರುವರು. ಮರೆಹೊಕ್ಕ ಬಾದೂರನನ್ನು ಕೊಂಡು ಹೋಗದ ಹೊರತು ಆ ರಾಜಕಾರ್ಯವು ತಪ್ಪದು. ಚಂಡಾಟ

ವಾಡಿ ಕೈಕಾಲು ನೊಂದರೆ ಅವರು ದಂಡೆತ್ತಿ ಬಾರದೆ ಇರುವರೆ ? ಆದ್ದರಿಂದ ಚಂಡಾಟವು ಬೇಡ" ಎಂದು ಬುದ್ಧಿವಾದ ಹೇಳಲು, ರಾಮನ ಮುದ್ದು ಮುಖವುಬಾಡಿ ಕಣ್ಣೀರು ತೊಟ್ಟಿಕ್ಕಿತು.

ಅದನ್ನು ಕಂಡು ಹರಿಯಮ್ಮನು ಮಗನನ್ನು ಸಂತೈಸಿದಳು "ನಿನ್ನ ಸೊಸೆಯರು ಐವರು ಹೊರತಾಗಿ ಉಳಿದವರು ನಿನ್ನ ಸಮಾನ" ರೆಂದು ತಾಯಿಗೆ ಹೇಳಿ ಪನ್ನಗಧರನ ಆಣೆಮಾಡಲು ಹರಿಯಲಾದೇವಿಯು "ನಿನ ಇಷ್ಟ" ಎಂದು ಹೇಳಿ ಕುರಿಕೋಳಿಗಳನ್ನು ಬಲಿಕೊಟ್ಟು ಚಂಡನ್ನು ತೆಗೆಯಿಸಿ ಕೊಂಡು ಹೋಗುವಂತೆ ತಿಳಿಸಿದಳು.

ಮುತ್ತಿನ ಚಂಡನ್ನು ತಾಯಿಯಿಂದ ಪಡೆದು, ಅಂದಣವನ್ನು ಏರಿ ಪಟ್ಟಣದ ಬೀದಿಯಲ್ಲಿ ಬರುತ್ತಿದ್ದ ಮನ್ಮಥಸಮರೂಪನಾದ ರಾಮನನ್ನು ನೋಡಬೇಕೆಂದು ಹೆಂಗಸರು ಮಕ್ಕಳನ್ನೆತ್ತಿಕೊಂಡು ಬೀದಿಯ ಇಕ್ಕೆಲಗಳಲ್ಲಿಯೂ ನಿಂತಿದ್ದರು. ಅವರನ್ನು ನೋಡಿ ಹೆತ್ತ ತಾಯನ್ನು ನೋಡಿ ಸಂತೋಷಪಡುವಂತೆ ರಾಮನು ಮನಸ್ಸಿನಲ್ಲಿಯೇ ಹಿಗ್ಗಿದನು. ಮಂಡಲೇಶ್ವರನಾದ ಅವನು ಚಂಡವಿಕ್ರಮ ಕಾಟಣ್ಣನು ಇದ್ದೆಡೆ ಬಂದು ಚಂಡನ್ನೊಪ್ಪಿಸಿದನು, ಅಲ್ಲಿಗೆ ಎಕ್ಕಟ್ಟಿಗರೆಲ್ಲ ಬಂದು ಸೇರಿದರು. ಬೊಮ್ಮ, ಕುಂಬಾರ ಸೋಮ. ವಿರೂಪನೆಲಗೇತಿ ಕಾಮ, ಭಟ್ಟರ ಭೀಮ, ಒಕ್ಕಲಿಗರ ಮುದ್ದ, ಅಕ್ಕಸಾಲೆಯ ಚಿಕ್ಕ, ಮೀನಿಗರ ಬೊಮ್ಮ, ಎಮ್ಮೆಯ ಚಿತ್ತ, ಎರಬೋತುಗ ರಂಗ, ಬೂಟಗ ಬೊಮ್ಮ, ಮಿಡಿಗೇಸಿ ನಲ್ಲ, ಆವಳಿ ಹನುಮ ಮುಂತಾದ ಕಟ್ಟಾಳುಗಳು ಬಂದು ಸೇರಿದರು. ಅರಸುಮಕ್ಕಳು, ಹಂಪರಾಜ, ಕಂಪರಾಜರೂ, ಬಿರುದಿನ ಮನ್ನೆಯರೂ, ಮನ್ನಲ ಮಾಚನೂ, ಮುಡಗುಡ್ಡ ಓಬನೂ, ಕೋಟಿಗಾರ ದೇವನೂ, ಬುಕ್ಕನೂ, ಪಾಲನೂ, ಹೊಳಕೆಯ ಕೆಂಚನು, ರಕ್ಕಸ ಚಿನುಮಾರನೂ ಮುಂತಾದ ಕತ್ತಿಯ ವೀರರು ಬಂದು ಸೇರಿದರು.

ಬಾದೂರಖಾನ, ಬಸವರಾಜಯ್ಯ, ಮಣಿಯದ ಮಲ್ಲ, ಹಳದಿಯ ತಿಪ್ಪ ಪಾರಿಯ ಮಲ್ಲ ಮುಂತಾದವರನ್ನೂ ರಾಮನು ಚಂಡಾಟಕ್ಕೆ ಕರೆಸಿದನು. ಒಂದು ಕಡೆ ಕಾಟಣ್ಣನೂ, ಇನ್ನೊಂದು ಕಡೆ ರಾಮನೂ ಹಿರಿಯ ಗಡಿಗಳಾದರು. ಹೊನ್ನುಮಳೆಯ ಕಠಾರಿ ಎಕ್ಕಟಿಗರೂ; ತೆಲುಗು ಮಾನ್ಯೆಯರ ಮಕ್ಕಳೂ, ಊರಲ್ಲಿದ್ದ ರಾಜಪುತ್ರರೂ ಮುಂತಾದವರನ್ನು ಕಾಟಣ್ಣನಿಗೆ

ಹಂಚಿಕೊಟ್ಟನು. ಉಡುಗೊರೆ ತೆಗೆದುಕೊಳ್ಳುವ ಎಕ್ಕಟಿಗರನ್ನು ತನ್ನ ಕಡೆ ತೆಗೆದುಕೊಂಡನು. ಹೀಗೆ ಭಿನ್ನವಿಲ್ಲದೆ ಉಭಯ ಗಡಿಗಳನ್ನು ಸಮನಾಗಿ ಹಂಚಿಕೊಂಡು, ರಾಮನ ಚಿಕ್ಕಮ್ಮ ರತ್ನಾಜಿಯ ಹೊನ್ನ ಉಪ್ಪರಿಗೆಯ ಅರ ಮನೆ ಬಯಲೇ ಆಟವಾಡಲು ಅನುಕೂಲವೆಂದು ನಿರ್ಧರಿಸಿದರು. ಚಿನ್ನದ ಏಳು ಲಗ್ಗೆ, ಬೆಳ್ಳಿಯ ಏಳು ಲಗ್ಗೆ ಹೂಡಿ ಆಟವನ್ನಾಡಲು ಅನುವಾದರು.

ರಾಮನಾಡುವ ಚಂಡಾಟವನ್ನು ನೋಡಲು ಆ ಬಯಲಿಗೆ ಊರಿನ ಬೆಲೆವೆಣ್ಣುಗಳೆಲ್ಲ ಮೂಲೋಕದ ವಿಟರನ್ನು ಮೋಹಗೊಳಿಸುವಂತೆ ಸಿಂಗರಿಸಿ ಕೊಂಡು ಬಂದು ಕುಳಿತರು. ಪಂಥವಾಡುವ ವಿಟರ ಎದೆಗೆ ಲಾಳಸರದ ಬೊಂಬೆಯಂತೆ ಕಳಕಳಿಸುವ ಕಾಂತಿಯ ಸಂಪಾಜಿಯೂ, ಸುರತದ ಸುಗ್ಗಿ ಯನ್ನಿತ್ತು ಸರಿರಾತ್ರಿಗೆ ಹಿಡಿಹೊನ್ನು ತೆಗೆದುಕೊಳ್ಳುವ ಹೊಳೆಹೊನ್ನೂರಿನ ರಾಮಾಜಿಯೂ, ಮಂದಹಾಸ ಮುಖಕಾಂತಿಯ ಗುರುಮಕೊಂಡದ ಸೋಮಿಯೂ, ಹೊಲಬು ತಪ್ಪಿದ ಹುಲ್ಲೆಗಳಂತೆ ಹಂಬಲಿಸುತ್ತ ಚಂಡಾಟ ನೋಡಬಂದರು.

ಇಕ್ಕೇರಿಯ ದುರ್ಗಿಯು ಬಾಲವೆಣ್ಣುಗಳ ಕೈಪಿಡಿದು ಬಾಳೆಯ ಸುಳಿ ಯಂತೆ ಬಳಕುತ್ತ ಬಂದಳು, ಹೊಳೆವ ಹೊಂಬಣ್ಣದ ಸೀರೆಯನ್ನುಟ್ಟ ಪಾಳೆಯದ ಪಾಪಾಜಿಯೂ, ಹಳೆಯಬೀದಿಯ ಹಂಪಾಜಿಯೂ, ಬಾಣಾವರದ ಭದ್ರಿಯೂ, ಪಟ್ಟಾವಳಿಯ ಸೀರೆಯನ್ನುಟ್ಟು ಆಭರಣ ತೊಟ್ಟು ಶೃಂಗಾರ ಮಾಡಿಕೊಂಡ ಕೊಟ್ಟೂರು ಕಾಮಾಜಿಯೂ ಬಂದರು. ಬಾದಾಮಿಯ ಬಸವಿಯೂ, ಗಂಧ ಕಸ್ತೂರಿ ತಿಲಕವನ್ನಿಟ್ಟ ಕುಂದಿರ್ಸಿಯ ಕೊಂಡಾಜಿಯೂ ಮಲ್ಲಿಗೆ, ಜಾಜಿ, ಸಂಪಿಗೆ ಹೂ ಮುಡಿದ ಬೇಲೂರ ಬೆನಕಾಜಿಯೂ, ಆದವಾ ನಿಯ ನಾಗಾಜಿಯೂ ರಾಮನನ್ನು ನೋಡಲು ಹೊನ್ನಿನ ಹಾವುಗೆ ಮೆಟ್ಟಿ ಕೊಂಡು ಬರುತ್ತಿರುವ ಚೆನ್ನೆಯರೊಡನೆ ಕುಂಭಕೋಣದ ಈರಿಯೂ ಬಂದಳು.

ಚೆನ್ನಪಟ್ಟಣದ ಚೆನ್ನಾಜಿಯು ನಾಸುವೆಬಣ್ಣದ ಸೀರೆಯುಟ್ಟು ವಿಟ ರನ್ನು ಮೋಸಗೊಳಿಸುತ್ತಲೂ, ಚಂದ್ರಗಿರಿಯ ಚೆನ್ನೆಯೂ ಚಂದ್ರಗಾವಿಸೀರೆ ಯನ್ನುಟ್ಟು ತನ್ನ ಒನಪು ಒಯ್ಯಾರಗಳಿಂದ ವಿಟರ ಮನಸ್ಸನ್ನು ಕಾಲ್ಗೆಡಿ ಸುತ್ತಲೂ, ಹಸುರು ಕುಪ್ಪಸ ತೊಟ್ಟು ಕಸ್ತೂರಿ ತಿಲಕವಿಟ್ಟು, ಹೊಸಪೇಟೆಯ ಜಂಬಲಿಂಗಿಯೂ, ಬಂಗಾರ ಬಣ್ಣದ ಸೀರೆಯುಟ್ಟು ಮುಖದಲ್ಲಿ ಹೊಸ

ಮುತ್ತಿನ ಬಟ್ಟನಿಟ್ಟು ಮದನನ ಮಸೆದ ಅಂಬಿನ ಮೊನೆಯಂತೆ ರಾಮನ ಚಂಡಾಟವನ್ನು ನೋಡಲು ಬಂದರು.

ಈ ರೀತಿಯಲ್ಲಿ ನಾನಾ ವೇಷಭೂಷಣಗಳಿಂದ ಅಲಂಕೃತರಾದ ಸೂಳೆಯರು, ಯಾವ ನೋಂಪಿಯನೋಂತು ರಾಮನನ್ನು ಅವನ ತಾಯಿಯು ಪಡೆದಳೋ ಎಂದು ಕೊಂಡಾಡುತ್ತ ತಮ್ಮತಮ್ಮಲ್ಲಿಯೇ ಮಾತನಾಡುತ್ತ ಚಂಡಾಟವನ್ನು ನೋಡುತ್ತಿದ್ದರು.

ರಾಮನ ಚಂಡಿನಾಟವು ಕುಮ್ಮಟದ ಜನರ ಕಣ್ಮನಗಳಿಗೆ ಹಬ್ಬವಾಯಿತು. ಆಟದ ಬಯಲಿನಲ್ಲಿ ಆದ ಬೊಬ್ಬೆಯಬ್ಬರ ಕುಮ್ಮಟನಗರದಲ್ಲೆಲ್ಲ ಹಬ್ಬಿತು. ಲಗ್ಗೆಯ ಹುಯ್ಯಲು ಬಣ್ಣಿಸಲಸದಳವಾಯಿತು, ಇಂಥ ಚಂಡಿನಾಟವನ್ನು ಈ ಭೂಮಿಯಲ್ಲಿ ಆಡಿದವರು ಯಾರೂ ಇಲ್ಲ. ಈ ಬೊಬ್ಬೆಯರ ಕೇಳಿ ಅರಮನೆಯಲ್ಲಿದ್ದ ರತ್ನಾಜಿಯು ತನ್ನ ಸಂಗಾತಿ ಸಂಗಿಯನ್ನು ಕಳುಹಿಸಿ ಸುದ್ದಿಯನ್ನು ತಿಳಿದುಕೊಂಡಳು. ಮನ್ಮಥ ಸಮರೂಪನಾದ ಚೆನ್ನಿಗರಾಮನನ್ನು ನೋಡಬೇಕೆಂಬಾಸೆಯಿಂದ ರತ್ನಾಜಿಯು ಪನ್ನೀರಿನಿಂದ ಸ್ನಾನ ಮಾಡಿ, ಕಾಲುಂಗುರ, ಪಿಲ್ಲಿ, ಹೊನ್ನಿನುಡುದಾರ, ತೋಳಭಾಪುರಿ, ಭುಜಕೀರ್ತಿ, ಸಾಲುಮುತ್ತಿನಸರ, ಕೊರಳ ಚಿಂತಾಕು ಮೊದಲಾದವುಗಳನ್ನು ಧರಿಸಿ, ಬೆರಳ ಹೊನ್ನುಂಗುರ, ಕೊರಳ ಮುತ್ತಿನ ಹಾರ, ಹರಳು ಕೆತ್ತಿಸಿದ ಚೂಡಾಂಗ, ಹೊನ್ನ ಹೂ, ಮುತ್ತಿನ ಸರಗಳನ್ನು ಇಟ್ಟುಕೊಂಡಳು. ತಲೆಯನ್ನು ಬಾಚಿಕೊಂಡು ಬೈತಲೆ ತೆಗೆದು ತುರುಬನ್ನಿಟ್ಟಳು. ಕಣ್ಣಿಗೆ ಕಪ್ಪು, ಹಣೆಗೆ ಕಸ್ತೂರಿತಿಲಕವಿಟ್ಟು, ಉಟ್ಟ ಉಡಿಗೆಯ ಮೇಲೆ ಸರಪಳಿ ಗೆಜ್ಜೆ ಮುತ್ತು ಹೆಣೆದ ರವಕೆ ತೊಟ್ಟಳು. ಶೃಂಗಾರವಾಗಿ ನಿಲುವುಗನ್ನಡಿಯಲ್ಲಿ ತನ್ನ ರೂಪವನ್ನು ನೋಡಿಕೊಂಡು ಕಟ್ಟಾಳು ರಾಮನಿಗೆ ತಾನು ಎಣೆಯೆಂದು ನಗುತ್ತ, ಸಂಗಿಯೊಡನೆ ಉಪ್ಪರಿಗೆಯನ್ನೇರಿದಳು.

"ಚಿತ್ತಗೆ ಜಯ! ತ್ರಿಯಂಬಕಜಯಗೆ ಜಯ!" ಎಂದು ಕಾಮದೇವನನ್ನು ಗಜಗಮನೆ ರತ್ನಾಜಿ ಕೊಂಡಾಡಿದಳು.

"ನನ್ನ ಆಸೆಯ ಕೈಗೂಡಿಸು; ಮನ್ಮಥರೂಪನಾದ ರಾಮ ಎನ್ನ ಒಲಿಯುವಂತೆ ಮಾಡು. ಚೆನ್ನಿಗರಾಮನ ಚಂಡು ನನ್ನ ಹಸ್ತಗತವಾದರೆ ಗುತ್ತಿ ದುರ್ಗದ ಯಲ್ಲಮ್ಮನಿಗೆ ಮನದಣಿವಂತೆ ಬೋನಗುರಿಗಳ ತಲೆಯ ಹೊಡಿಸುವೆನು; ಮೂರು ಮಾಣಿಕದ ಆರತಿಯನ್ನೆತ್ತುವೆನು. ಹುಲಿಗೋಸುರಮ್ಮನಿಗೆ

ಹೊನ್ನ ಕಾಣಿಕೆಯ ಕೊಡುವೆನು; ಒಪ್ಪತ್ತೂಟದ ವ್ರತವನ್ನು ಹಿಡಿಯುವೆನು. ಎನ್ನೊಡೆಯನಾದ ಕಂಪಿಲಸ್ವಾಮಿಗೆ ಮುಡುಪಿನಿಂದ ಮುಂದಲೆಯನ್ನು ಕೊಡುವೆನು. ಧುರಧೀರ ರಾಮನು ನನ್ನ ವಶವಾಗಿ, ಭೋಗದಿಂದ ಮಗುವು ಜನಿಸಿದರೆ, ತಿರುಮಲದೇವರಿಗೆ ತಿರುವಡಿಯನ್ನು ಮಾಡಿಸುವೆನು; ಚಿನ್ನದ ಕಳಸವನ್ನು ಮಾಡಿಸುವೆನು. ಅಕ್ಕನ ಮಗ ರಾಮನು ನನ್ನನ್ನು ಸೇರಿದರೆ ಮುಪ್ಪುದಾರಿಯ ಗುಡಿಗೆ ಉಪ್ಪರಿಗೆಯನ್ನು ಕಟ್ಟಿಸುವೆನು. ಕಂಪಿಲರಾಯನ ಮಗ ರಾಮನು ನನ್ನನ್ನು ಸೇರಿದರೆ, ಹಂಪೆಯೊಡೆಯ ವಿರೂಪಾಕ್ಷೇಶ್ವರನಿಗೆ ಹಣ್ಣುಫಲ ಅರ್ಪಿಸುವೆನು. ರಾಮನು ನನಗೆ ಸಿಕ್ಕಿದನಾದರೆ, ಮುಕ್ಕಣ್ಣ ನೊಡನಾಡಿ ಬಸವೇಶ್ವರನಿಗೆ ಅಕ್ಕರದಿಂದ ಹೊಕ್ಕಳ ಗಂಟೆಯ ಮಾಡಿಸಿ ಕೊಟ್ಟು ಕೈ ಮುಗಿಯುವೆನು" ಎಂದು ಬಗೆಬಗೆಯಿಂದ ಎಲ್ಲ ದೇವರನ್ನೂ ಪ್ರಾರ್ಥಿಸಿದಳು.

"ನಿನ್ನ ಇಷ್ಟಾರ್ಥ ಸಂದರೆ, ಪೃಥ್ವೀಪತಿ ಕಂಪಿಲರಾಯನು ಪ್ರಶ್ನಿಸಿದರೆ ಏನು ಹೇಳುವೆ?" ಎಂದು ಸಂಗಿಯು ಕೇಳಲು,

"ನೀನು ಬೇಟೆಯಾಡಲು ಹೋದಾಗ, ಶಾರ್ದೂಲ ಸಿಂಹಗಳು ನಿನ್ನನ್ನು ತುಡುಕಿ ಘಾತಿಸದಂತೆ ಗಿರಿ ಮಲ್ಲಿಕಾರ್ಜುನಸ್ವಾಮಿಯನ್ನು ಪ್ರಾರ್ಥಿಸಿ ಹರಕೆ ಹೊತ್ತಿರುವೆನು ಎಂದು ಪರಿಪರಿಯಿಂದ ಸಂತೋಷವನ್ನು ತೋರಿಸುವೆನು" ಎಂದು ರತ್ನಾಜಿ ಉತ್ತರವಿತ್ತಳು.

ರಾಮನನ್ನು ತನಗೆ ಪಾಲಿಸು ಎಂದು ಮತ್ತೊಮ್ಮೆ ಈಶ್ವರನನ್ನು ಪ್ರಾರ್ಥಿಸಿ, ಸಂಗಿಯೊಡನೆ ಉಪ್ಪರಿಗೆಯನ್ನೇರಿ ರಾಜಬೀದಿಯ ಮಧ್ಯದಲ್ಲಿ ಲೀಲೆಯಿಂದ ಚಂಡನಾಡುತ್ತಿದ್ದವರನ್ನು ಕಂಡಳು.

ಆಟವಾಡುತ್ತಿದ್ದವರಲ್ಲಿ ಒಡೆಯನಾರು, ಬಂಟನಾರು ಎಂಬುದನ್ನು ತಿಳಿಯಲೋಸುಗ ಸಂಗಿಯನ್ನು ಪ್ರಶ್ನಿಸಿದಳು. ಅದಕ್ಕೆ ಸಂಗಿಯು ಪ್ರತಿಯೊಬ್ಬರನ್ನೂ ವಿವರಿಸುತ್ತ ಅವರವರ ಹೆಸರುಗಳನ್ನು ತಿಳಿಸಿದಳು. ತಳವಾರ ಹರಿಯ, ಬಾದೂರಖಾನ, ಹಾವಳಿ ಲಿಂಗ, ಗುಜ್ಜಾಲ ಹರಿಯ, ಕುಂಬಾರ ಕಲ್ಲ, ಒಕ್ಕಲಿಗರ ಮುದ್ದ, ಕಬ್ಬಲಿಗರ ನಾಗ, ಜಂಗಮರ ಬಸವ, ಮಡಿವಾಳ ಮಾಚಯ್ಯ, ಅಸಗೋಡು ಬಸವ, ಕಂಚುಗಾರ ಕಾಳ, ಗಂಡಿಕೋಟೆಯ ಗಂಗರಾಜ, ಪಾಂಡುರಂಗದೇಶದ ರಾಯ ತುಳುವೂರು ಗಿರಿಯ, ತೊರೆಗಲ್ಲು ಬಾದಾಮಿನಾಡುಗಳ ಅರಸ, ಮಿಡಿ

ಗೇಸಿ ನಿಂಗ, ಹೊಳಲ್ಕೆರೆಯ ಸಂಗ, ಚಂದ್ರಗಿರಿಯ ಸಿದ್ಧ, ಪಂಚಮರ ಬಸವ, ಉದಯಗಿರಿಯ ಸಿದ್ಧರಾಜ, ಪೆನಗೊಂಡೆಯ ಸೋಮ, ಏಕಾಂಗಿ ವೀರಬಸವ, ರಾಹುತ ಸಿದ್ಧ, ಅಕಳಂಕ ಸಿದ್ಧ, ನಿಡುಗಲ್ಲ ಕಾಮ, ಕುಂದಿರ್ಪ ತಮ್ಮ, ರಾಯದುರ್ಗದ ವೀರ, ಬೋಗಾರ ಮಲ್ಲ, ಕಂಭ ಕೋಣದ ಕಲ್ಲ, ಗಡಿಕೋಟೆಯ ದೇವ, ಗೊಲ್ಲರ ಗುಜ್ಜಯ್ಯ, ಮಾದಿಗರ ಹಂಪ, ಮಾದ, ಮುನ್ನೂಲ ಮಾಚ, ಕರುಗೋಡು ಸಂಗಮ, ಚಿನ್ನೂರಲಗಿರಿ ದುರ್ಗದ ಶಿಂಗ, ಮೀನಿಗರ ಲಕ್ಕ, ಉಚ್ಚಂಗಿದುರ್ಗದ ಪಾಲ ಬಳ್ಳಾರಿ ಹನುಮ, ಪಾಲ್ಗುಂದಿ ಚಿನ್ನ, ಕಂಪಿಲನ ಅಳಿಯ, ಹಿರಿಯ ಕುಮಾರ ಕಾಟಣ್ಣ, ಮಂತ್ರಿ ಬೈಚಪ್ಪನ ಮಗ, ಯಂತ್ರವಾಹಕ, ಕಲ್ಲುಕೋಟೆಯ ಚಿತ್ತ, ಕೊಪ್ಪಳದ ತಿಮ್ಮ ಎಂದು ಒಬ್ಬೊಬ್ಬರನ್ನಾಗಿ ವಿವರಿಸಿ ಗುರುತು ಹೇಳಿದಳು.

"ಇವರೆಲ್ಲ ಇರಲಿ, ನನ್ನ ಮನ ಒಪ್ಪುವ ಚೆಲುವ ರಾಮನನ್ನು ತೋರಿಸು, ಅವನನ್ನು ತೋರಿಸಿದರೆ ಉಡಿತುಂಬ ಹೊನ್ನು ಹೊಯಿಸು ವೆನು" ಎಂದು ಕಪ್ಪುರಗಂಧಿ ರತ್ನಾಜಿ ನುಡಿದುದನ್ನು ಕೇಳಿ, ಸಂಗಿಯು ನಾಲ್ಕು ಸತ್ತಿಗೆಗಳನ್ನು ಹಿಡಿಸಿಕೊಂಡು ಚಾಮರದಿಂದ ಬೀಸಿಕೊಳ್ಳುತ್ತಾ ಭೂಲೋಕಕ್ಕೆ ಅತಿರೂಪನೂ, ಕಾಲನೇಮಿಯ ಗಂಡನೆಂಬ ಬಿರುದಾಂಕಿ ತನೂ ಆದ ಕುಮಾರರಾಮನನ್ನು ತೋರಿಸಿದಳು. ರಾಮನೆಂಬ ಹೆಸರನ್ನು ಕೇಳಿ ಸಂತೋಷದಿಂದ ರತ್ನಾಜಿ ಹಿಗ್ಗಿ, ಅವನನ್ನು ದೃಷ್ಟಿಸಿ ನೋಡಿದಳು. ಹೊನ್ನ ಪುತ್ಥಳಿಯಂತೆ, ಹೊಳೆವ ಕನ್ನಡಿಯಂತೆ ರೂಪುಳ್ಳ ರಾಮನನ್ನು ಕಣ್ದಣಿಯೆ ನೋಡಿ, ಹಿಗ್ಗಿ ಮನಸೋತಳು. ಒಡನೆಯ ಇವಳ ಮೈಯಲ್ಲಿ ತೀವ್ರ ತಾಪವುಂಟಾಯಿತು. ಮನ್ಮಥನು ತನ್ನೈದು ಬಾಣಗಳನ್ನೂ ಹೂಡಿ ರತ್ನಾಜಿಯ ಎದೆಗೆ ಎಸೆದನು. ಐದು ಬಾಣ ಎದೆಯಲ್ಲಿ ನಾಟಲು, ರತ್ನಾಜಿಯು ಕಾತರಿಸಿ ಕಂಗೆಟ್ಟು ಹೃದಯ ತಲ್ಲಣಿಸಿ, ವಿರಹದಿಂದ ಮೈ ಮರೆತಳು, ಬಿದ್ದ ಭಾರಕ್ಕೆ ರತ್ನಾಜಿಯ ಮುದ್ದು ಮುಖವು ಬಾಡಿತು ಮನಸ್ಸು ತಳಮಳಿಸಿತು. ಅಕಸ್ಮಾತ್ತಾಗಿ ಭುವನೇಶ ಕಂಪಿಲರಾಯನು ಇಲ್ಲಿಗೆ ಬಂದು ರತ್ನಾಜಿಯ ಅವಸ್ಥೆಯನ್ನು ಕಂಡರೆ, ಇವಳ ಕಿವಿ, ಮೂಗು ಮುಂದಲೆಯನ್ನು ಕಳೆದು ಅಪಮಾನಮಾಡದೆ ಬಿಡನು, ಇದಕ್ಕೆ ಒಂದು ಉಪಾಯವನ್ನು ಯೋಚಿಸಬೇಕೆಂದು ಚಿಂತಿಸುತ್ತ, ಸಂಗಿಯು ಪನ್ನೀರಿ

ನಿಂದ ರತ್ನಾಜಿಯ ಮುಖವನ್ನು ತೊಳೆಯಲು, ರತ್ನಾಜಿಯು ಮೂರ್ಛೆ ತಿಳಿದೆದ್ದು, ಚಲುವ ಚೆನ್ನರಾಮನನ್ನು ತೋರಿಸೆಂದು ಸಂಗಿಗೆ ನುಡಿದಳು.

ರತ್ನಾಜಿಯನ್ನು ಮೇಲಕ್ಕೆತ್ತಿ ಪೀಠದಲ್ಲಿ ಕುಳ್ಳಿರಿಸಿ ರಾಮನನ್ನು ತೋರಿಸುತ್ತ ಸಂಗಿಯು ಅವನ ಗುರುತು ಹೇಳಿದಳು. ಕಪ್ಪು ಮೀಸೆ ಕಸ್ತೂರಿ ತಿಲಕ, ಬಲ್ಪಿನ ಚಮುರಿ ಸುತ್ತ, ಮೀಸೆಯನ್ನು ಒತ್ತಿ, ಕಮುರುಗಡ್ಡ ಬಿಟ್ಟು, ಉತ್ತಮ ಧೀರನಂತೆ ಚಂಡನಾಡುತ್ತಿರುವ ರಾಮನನ್ನು ನೋಡು ಎಂದು ಸಂಗಿಯು ತೋರಿಸಿದಳು. ಅವನನ್ನು ಕಂಡು ಬೆರಗಾಗಿ, ಇಂದ್ರನೋ, ಚಂದ್ರನೋ ಎಂದು ಕೊಂಡಾಡುತ್ತಾ, ಇನ್ನೊಮ್ಮೆ ಅವನನ್ನು ತೋರಿಸು, ನಿನಗೆ ಉಡುಗೊರೆ ಕೊಡುತ್ತೇನೆ; ಅವನನ್ನು ಕಂಡು ನನ್ನ ಮನಸ್ಸು ಸೋತು ಹೋಗಿರುವುದು ಎಂದು ರತ್ನಾಜಿಯು ನುಡಿದಳು;

ಇತ್ತ ಕಾಟಣ್ಣನು ಹಿಡಿದಿದ್ದ ಚಂಡನ್ನು ನೋಡಿ ಅದನ್ನು ಕೊಡು ನಾನು ಎಸೆದು ನೋಡುವೆನು ಎಂದು ರಾಮನು ನುಡಿಯುತ್ತಿರಲು, ಕಾಟಣ್ಣನು ಬೊಬ್ಬೆಮಾಡಿ ಚಂಡಿನಿಂದ ಲಗ್ಗೆಯನ್ನು ಹೊಡೆದನು. ಸರಗೋಲು ಮುರಿದು ಲಗ್ಗೆಯೆಲ್ಲ ನುಗ್ಗೆದ್ದು ಉರುಳಿದವು, ಅಣ್ಣನಾಡಿದ ಚಂಡನ್ನು ತಡೆಯಬಾರದೆಂದು ರಾಮನು ಕೈಮುಗಿದನು. ಕಾಟಣ್ಣನಾಡಿದ ಮುತ್ತಿನ ಚಂಡನ್ನು ರಾಮನ ಕಡೆಯ ಗುಜ್ಜಲ ಹರಿಯನು ಮನದಲ್ಲಿ ಹಿಗ್ಗುತ್ತ ಹಿಡಿದನು. ಈ ಸಂತೋಷಕ್ಕಾಗಿ ತಮ್ಮಟೆಯನ್ನು ಬಾರಿಸಿದರು. ಬಿರುದಿನ ಕಹಳೆಗಳು ಹಿಡಿಯಲ್ಪಟ್ಟವು.

ಲಗ್ಗೆಯನ್ನು ಹೂಡಿ! ನಾಲ್ಕು ದಿಕ್ಕಿಗೂ ಓಡಿ! ಚಂಡನ್ನು ನೀಡಿ! ಎಂಬ ಬೊಬ್ಬೆಯು ನಾಲ್ಕು ದಿಕ್ಕಿನಲ್ಲೂ ಹುಟ್ಟಿತು. ದೇವಿಶೆಟ್ಟಿ ಲಿಂಗಣ್ಣನು ಚಂಡಿನಿಂದ ಹೊಡೆಯಲು, ಬೇಡರ ನಾಯಕರು ಹೆದರಿದರು. ಬೂಟಕ ಬೊಮ್ಮನ ಮೊಣಕಾಲು ಮುರಿಯಿತು. ದೇವಿಶೆಟ್ಟಿ ಲಿಂಗಣ್ಣನು ಎಸೆದ ಮುತ್ತಿನ ಚೆಂಡನ್ನು ಸಂಗಮನು ಹಿಡಿದನು. ಇದಕ್ಕಾಗಿ ಕಾಟಣ್ಣನ ಪರಿವಾರದವರು ಭೇರಿ, ಮದ್ದಳೆ, ಜಾಗಟೆ, ಕಹಳೆ, ತುತ್ತೂರಿ, ಕೊಂಬುಗಳನ್ನು ಬಾರಿಸಿದರು. ಅನಂತರ ಲಗ್ಗೆಯನ್ನು ನೋಡಿ, ಗುರಿನಿರಿಯಿಟ್ಟು ಚಂಡನ್ನು ಹೊಡೆಯಲು ಅದು ಭೋರೆಂದು ಬೊಬ್ಬಿರಿಯುತ್ತ ರಾಮನ ಮನ್ನೆಯರನ್ನು ಕೊಲ್ಲದೆಬಿಡೆನೆಂದು ನುಗ್ಗಿತು.

ಭಾವಸಂಗಮನು ಎಸೆದ ಮುತ್ತಿನ ಚಂಡನ್ನು ಕೋಟಗರ ದ್ಯಾವನು

ಹಿಡಿದು ತಂದು ರಾಮನ ಕೈಯಲ್ಲಿ ಕೊಟ್ಟನು. ಅನಂತರ ಅದನ್ನು ರಾಮನು ಎಸೆದಾಗ ಸಾವಕಾಶಮಾಡದೆ ಭೂಮಿಯಿಂದ ಆಕಾಶಕ್ಕೆ ಒಗೆಯಲು ಅದನ್ನು ಕಂಡು ಜಗಲೂರ ಕಾಮಯ್ಯ ಕೈಯಿಂದ ಬಿಗಿಯಾಗಿ ಹಿಡಿದನು. ಈ ರಭಸ ದಲ್ಲಿ ಹಾರೋರ ಲಿಂಗನ ಹರಣವಾಯಿತು. ಪಾಪನ ಹಲ್ಲು ಮುರಿಯಿತು. ಪುನಃ ರಾಮನು ಇಟ್ಟ ಮುತ್ತಿನ ಚಂಡನ್ನು ಭಾವಸಂಗನು ತಡೆದನು. ಅವನು ಹೊಡೆದುದನ್ನು ಬಾದೂರಖಾನನು ಹಿಡಿದನು. ಬಾದೂರಖಾನನು ಚಂಡನ್ನು ಲಗ್ಗೆಯ ಬಳಿಗೆ ಎಸೆಯುವುದರೊಳಗಾಗಿ ಕಾಟಣ್ಣನ ಮಂದಿ ಲಗ್ಗೆಯ ಬಳಿಗೆ ಬಂದರು. ಅಷ್ಟರಲ್ಲಿಯೇ ಚಂಡು ಬರಲು ಮನ್ನೆಯರು ಓಡುವ ರಭಸದಲ್ಲಿ ತಲೆಕೆಳಗಾಗಿ ಉರುಳಿದರು. ಈ ಸಮಯದಲ್ಲಿ ದೇವಿಶೆಟ್ಟಿ ಲಿಂಗಣ್ಣನು ಸಿಂಹದಂತೆ ರೇಗುತ್ತ ಓಡಿಬಂದು ಚಂಡನ್ನು ಹಿಡಿದು ಲಗ್ಗೆಯನ್ನು ಹೊಡೆದು ಕೆಡವಲು ಚೆಂಡು ಎದುರುಗಡಿಯವರೆಗೆ ತಗುಲಿ ಮುನ್ನಲ ಮಾಚನ ಮೂಗು ಬಿಚ್ಚಿತು; ಕಂಪನ ಕಾಲೊಡೆಯಿತು; ವಿರುಪನ ಕೆನ್ನೆ ಹರಿಯಿತು.

ಈ ರೀತಿ ತನ್ನ ಕಡೆಯ ಮನ್ನೆಯರು ನೊಂದುದನ್ನು ರಾಮನು ನೋಡಿ ಕೋಪ ತಾಳಿದನು. ಚಂಡನ್ನು ಹಿಡಿಯುವುದಕ್ಕೆ ಓಡಿಬಂದು ಅದನ್ನು ತೆಗೆದುಕೊಂಡು ಹೂಡಿದ ಲಗ್ಗೆಗೆ ಗುರಿಯಟ್ಟು ಹೊಡೆದನು. ಆ ಲಗ್ಗೆಯು ಚೆಲ್ಲಾಪಿಲ್ಲಿಯಾಗಿ ಹೋಯಿತು. ಆದರೆ ಕಾಟಣ್ಣನ ಕಡೆಯವರು ದಿಕ್ಕು ದಿಕ್ಕುಗಳಿಂದ ಲಗ್ಗೆಯ ಬಳಿಗೆ ಹೊಕ್ಕು ಲಗ್ಗೆಯನ್ನು ಹೂಡಿದರು. ಅನಂತರ ಕಾಟಣ್ಣನು ಚಂಡನ್ನೆಸೆಯಲು ರಾಮನು ಹಿಡಿದನು. ಲಗ್ಗೆಯನ್ನು ಕೆಡಹು! ಕಾಲಾಳನ್ನು ಹೊಡಿ! ಎಂದು ರಾಮನು ತನ್ನ ಕಡೆಯವರಿಗೆ ಹೇಳುತ್ತಿದ್ದನು. ಕಾಟಣ್ಣ, ಕೊಳ್ಳಿಯ ನಾಗಣ್ಣ, ಸೋಮೇದೇವ, ಚಿನ ಮಾದ, ಕಾಮುಗೇತಿಯ ಚಿಕ್ಕ ಈ ಐವರು ಲಗ್ಗೆಯ ಬಳಿಗೆ ನುಗ್ಗಿ ಇದಿರು ಕಡೆಯವರು ಎಲ್ಲಕಡೆಯಿಂದಲೂ ಮುತ್ತುತ್ತಿರುವುದನ್ನು ಕಂಡು ರಾಮನು ತನ್ನ ಮಂದಿಯನ್ನು ಅವರಿಂದ ನೋವಾಗದಂತೆ ಹಿಂದಕ್ಕೆ ಸರಿಸಿ, ತಾನೆ ಮುಂದೆ ನುಗ್ಗಿ ಮುತ್ತಿನ ಚಂಡನ್ನು ಲಗ್ಗೆಗೆ ಗುರಿಯಿಟ್ಟು ಎಸೆಯಲು ಅದು ಭುಗಿಭುಗಿಲ್ ಎನ್ನುತ್ತ ನುಗ್ಗಿತು. ಆದರ ರಭಸಕ್ಕೆ ಕೆಂಧೂಳಿ ಎದ್ದು ಭೂಮ್ಯಂತರಿಕ್ಷಗಳನ್ನು ತುಂಬಿತು. ಗೋಪುರದ ಚಿನ್ನದ ಕಳಸಕ್ಕೆ ಸಿಡಿ-

ಗುವಂತೆ ಆ ಚಂಡು ಭೋರ್‌ಗುಟ್ಟುತ್ತ ಹಾರಿಹೋಗಿ ರತ್ನಾಜಿಯ ಅರಮನೆಯ ಅಂಗಳದಲ್ಲಿ ಬಿದ್ದಿತು.

ಅಂಗಳದಲ್ಲಿ ಬಂದು ಬಿದ್ದ ರಾಮನ ಚಂಡನ್ನು ಧಿಟ್ಟ ರತ್ನಾಜಿಯು ಕಂಡು ಅದರ ಮೇಲೆ ಬಿದ್ದು, ಅರಮನೆಯೊಳಕ್ಕೆ ತೆಗೆದುಕೊಂಡು ಹೋಗಿ, ತನ್ನ ಹೊಳೆವ ಕಣ್ಣುಗಳಿಗೆ ಒತ್ತಿಕೊಂಡು, ಪನ್ನೀರಿನ ಚಳವನ್ನು ಕೊಟ್ಟು, ಆ ಚಂಡು ಧುರಧೀರ ರಾಮನಿಗೆ ಸಮಾನವಾದುದೆಂದುಕೊಳ್ಳುತ್ತ, ನನ್ನ ಭಾಗ್ಯವು ಇಂದಿಗೆ ಬಂದಿತು ಎಂದು ಹಿರಿಹಿರಿ ಹಿಗ್ಗಿದಳು; ಮುದದಿಂದ ಮುದ್ದಿಸಿದಳು. ತಾನು ಬಯಸಿದ ಬಯಕೆಯು ಕೈಗೂಡಿತೆಂದು ಪುನಗು ಜವಾಜಿ, ಕಸ್ತೂರಿಯನ್ನು ಮುತ್ತಿನ ಚಂಡಿಗೆ ಲೇಪಿಸಿ, ಪಟ್ಟು ಪೀತಾಂಬರವನ್ನು ಸುತ್ತಿ, ಗಂಧವನ್ನು ಹಚ್ಚಿದಳು. ಚಂಡಿನ ಎದುರಿಗೆ ನಿಂತು ಮುತ್ತಿನಾರತಿಯೆತ್ತಿ, ಒಸಗೆಯನ್ನು ಹಾಡಿ, ಮಂಚದ ಮೇಲೆ ಚಿನ್ನದ ಗದ್ದುಗೆಯನ್ನು ಹಾಸಿ ಚಂಡನ್ನು ಅದರ ಮೇಲಿಟ್ಟು ಅಂದಿನಿಂದ ಪೂಜೆ ಮಾಡಿದಳು. ತನ್ನ ಮನವನ್ನೇ ಅದರ ಕಾವಲಿಗಿಟ್ಟು ಸಂಗಿಯನ್ನು ಕರೆದು ಹೊರಗೆ ಕಾವಲಿರಬೇಕೆಂದು ಆಜ್ಞೆ ಮಾಡಿದಳು.

ತಂದೆಯಿಲ್ಲದ ಅರಮನೆಗೆ ಹೋದರೆ ಕುಂದುಬರುವುದೆಂದು ರಾಮ ಬರುವನೋ, ಇಲ್ಲವೋ ಎಂದು ಚಿಂತೆಗೊಳಗಾಗಿ ಅನುಮಾನದಿಂದ ಮೂಗಿನ ಮೇಲೆ ಬೆರಳಿಟ್ಟು ಕುಟಿಲದೇವಿಯನ್ನು ನೆನೆದಳು. ಒಮ್ಮೆ ರಾಮನು ಬಾರದಿರನೇನೋ ಎಂದು ಬಾಗಿಲ ಕಡೆ ನೋಡುವಳು; ಮತ್ತೊಮ್ಮೆ ಚಂಡನ್ನು ನೋಡುವಳು; ರಾಮನನ್ನು ನೆನೆವಳು; ಅಂತು ಅವಳಿಗೆ ಚಿಂತೆವೆಗ್ಗಳವಾಯಿತು.

ಇತ್ತ ಮನ್ನೆಯರ ಚಂಡು ಹೋಯಿತು. ರಾಮನಿಗೆ ವ್ಯಥೆ ಬಂದಿತು. ಕಂಪಿಲರಾಯನು ಬಂದರೆ ಏನೆನ್ನುವನೋ ಎಂದು ಚಿಂತಿಸುತ್ತ ಕಾಟಣ್ಣನ ಬಳಿಗೆ ಬಂದರು.

"ಚಿಕ್ಕಮ್ಮನು ಚಂಡನ್ನು ಕೊಡದಿರಲು ಕಾರಣವಿಲ್ಲ. ಚಿಕ್ಕಮ್ಮನ ಬಳಿಗೆ ಹೋಗಿ ತಾಯಿ ಎಂದು ಆಕೆಯ ಪಾದಕ್ಕೆರಗಿ ಚಂಡನ್ನು ಬೇಡು; ಕಂದ ರಾಮನು ಚಂಡನಾಡುವಾಗ ಕೈತಪ್ಪಿ ಅಂಗಳಕ್ಕೆ ಬಂದು ಬಿದ್ದಿತು ಎಂದು ಹೇಳಿ ಚಿಕ್ಕಮ್ಮನನ್ನು ಪ್ರಾರ್ಥಿಸಿ ಚಂಡನ್ನು ತೆಗೆದುಕೊಂಡು ಬಾ" ಎಂದು ಕಾಟಣ್ಣನಿಗೆ ರಾಮನು ದುಃಖದಿಂದ ಹೇಳಲು, ಕಾಟಣ್ಣನು ರತ್ನಾಜಿಯ ಅರಮನೆಗೆ ಬಂದು ಸಂಗಿಯನ್ನು ಕಂಡು,

"ಚಂಡು ಇಲ್ಲಿಗೆ ಬಂದುಬಿದ್ದಿತು, ಕೊಡು" ಎಂದು ಕೇಳಿದನು.

"ನಿಮ್ಮಾಣೆಯಾಗಿಯೂ ಚಂಡು ನನ್ನ ಕಣ್ಣಿಗೆ ಕಾಣಿಸಲಿಲ್ಲ" ಎಂದು ಹೇಳಿ, ಅವಳು ಅಮ್ಮಾಜಿಯ ಬಳಿಗೆ ಹೋಗಿ ಕಾಟಣ್ಣ ಬಂದ ಸಂಗತಿಯನ್ನು ತಿಳಿಸಿದಳು.

ರತ್ನಾಜಿ "ಚಂಡು ಇಲ್ಲಿದೆ ಎಂದು ಗಂಡಸಿಲ್ಲದ ಅರಮನೆಗೆ ಬಂದಿರುವವರು ಯಾರು" ಎಂದು ಕೇಳಲು,

"ನಾನು ನಿಮ್ಮ ಹಿರಿಯಮಗನಾದ ಕಾಟ, ಚಂಡನ್ನು ಬೇಡಲು ಬಂದಿರುವೆನು" ಎಂದು ಉತ್ತರವನ್ನಿತ್ತನು.

ರತ್ನಾಜಿಯು "ಅರಸಿಲ್ಲದ ಅರಮನೆಗೆ ಬರುವುದು ಗುಣವಲ್ಲ; ಚಂಡು ಇಲ್ಲಿಗೆ ಬಂದಿಲ್ಲ. ಅದು ಇದ್ದಲ್ಲಿ ಹುಡುಕು, ಹೋಗು" ಎಂದು ಅವನನ್ನು ದಬ್ಬಿಸಿದಳು.

"ಮುತ್ತಿನ ಚಂಡು ಅಂಗಳಕ್ಕೆ ಬಂದು ಬಿದ್ದಿತು. ಅದನ್ನು ನೀನೇ ತರಿಸಿಕೊಡು ಚಿಕ್ಕಮ್ಮ, ಅದು ನಿಮ್ಮ ಮುದ್ದಿನ ಮಗ ರಾಮನು ಎಸೆಯಲು ಕೈತಪ್ಪಿ ನಿಮ್ಮ ಮನೆಯ ಅಂಗಳಕ್ಕೆ ಬಿದ್ದಿತು. ಅದನ್ನು ಹುಡುಕಿಸಿ ಕೊಡಮ್ಮ" ಎಂದು ವಿನಯದಿಂದ ಕಾಟಣ್ಣ ಪ್ರಾರ್ಥಿಸಿದನು.

ಶೃಂಗಾರೋದ್ಯಾನದಲ್ಲಿ ಬಿದ್ದಿರುವುದೇ? ನೋಡೋಣ ಎಂದು ರತ್ನಾಜಿಯು ಸಂಗಿ, ಕಾಟಣ್ಣರನ್ನು ಕರೆದುಕೊಂಡು ತೋಟಕ್ಕೆ ಬಂದಳು. ರಾಮ ನೆಸೆದ ಚಂಡು ಹೂಗಿಡಗಳ ಮಧ್ಯದಲ್ಲಿರುವುದೇನೋ ಎಂದು ಅಲ್ಲಲ್ಲಿ ಹುಡುಕಿದರು. ಮಲ್ಲಿಗೆ ಬಳ್ಳಿಗಳ ಮಧ್ಯೆ ಕಾಣಲಿಲ್ಲ. ಪಚ್ಚೆಯ ಗಿಡಗಳಡಿಯಲ್ಲಿ ನೋಡಿದರು; ಭಾವಿಯ ದಡದಲ್ಲಿ ಹುಡುಕಿದರು; ನಿಂಬೆಯ ಗಿಡದಡಿಯಲ್ಲಿ ತಿರುಗಿದರು; ಎಲ್ಲೆಲ್ಲಿ ಹುಡುಕಿದರೂ ಅದು ಸಿಗದಿರಲು ಅರಮನೆಗೆ ಬಂದು ಕಾಟಣ್ಣನಿಗೆ ಗಂಧವೀಳೆಯವನ್ನಿತ್ತು ಕಂದ ರಾಮನನ್ನು ನೋಡಬೇಕೆಂದು ರತ್ನಾಜಿಯು ನುಡಿದಳು.

"ಚಂಡಿನ ನೆವದಿಂದಾದರೂ ರಾಮನು ಇಲ್ಲಿಗೆ ಬಂದರೆ ಅವನನ್ನು ನೋಡಿ ಸಂತೋಷದಿಂದ ಚಂಡು ಕೊಡುವೆನು. ಅವನು ಬಂದು ತೆಗೆದು ಕೊಂಡು ಹೋಗಲಿ. ರಾಮನನ್ನು ಬರಹೇಳು" ಎಂದು ನುಡಿದಳು.

"ರಾಮನಿಗೆ ಬುದ್ಧಿ ಸಾಲದು. ಅವನು ಇಲ್ಲಿಗೆ ಬರಲರಿಯನು, ಚಂಡನ್ನು ಕೊಡಮ್ಮಾ" ಎಂದು ಕಾಟಣ್ಣನು ಪುನಃ ಕೇಳಿದನು.

"ಮಗನು ಬರದ ಹೊರತು ಚಂಡನ್ನು ಕೊಡುವುದಿಲ್ಲ. ಈ ಜಗದಲ್ಲಿ ತಾಯಿ ಮಕ್ಕಳ ನಡುವೆ ನಾಚಿಕೆಯುಂಟೇ? ರಾಮನು ನನ್ನ ಮನೆಯ ಹಗೆಯೆ? ಆದ್ದರಿಂದ ರಾಮನನ್ನು ಇಲ್ಲಿಗೆ ಬರಹೇಳು" ಎಂದು ನುಡಿದಳು.

"ತಲೆಯು ಇದ್ದಂತೆ ಮುಂಡಕ್ಕೆ ಸೇಸೆ ಇಡುವರೆ?" ಎಂದು ಕಾಟಣ್ಣನು ಹೇಳಿದ ಮಾತಿಗೆ, "ನನ್ನ ಮೋಹದ ಮಗ ಬಂದಲ್ಲದೆ ಚಂಡನ್ನು ಯಾರಿಗೂ ಕೊಡುವುದಿಲ್ಲ. ರತ್ನದ ತೂಗುಮಂಚದ ಮೇಲೆ ಚಂಡನ್ನಿಟ್ಟು ಪೂಜೆ ಮಾಡಿರುತ್ತೇನೆ. ಅದನ್ನು ರಾಮನೇ ಬಂದು ತೆಗೆದುಕೊಂಡು ಹೋಗಲಿ" ಎಂದು ಉತ್ತರವಿತ್ತಳು.

"ಮಕ್ಕಳ ಕೂಡ ಸರಸವೇ! ಹಿರಿಯರಿಗಿದು ಗುಣವೇ! ಆದ್ದರಿಂದ ಚಂಡನ್ನು ತರಿಸಿಕೊಟ್ಟು ನನ್ನನ್ನು ಕಳುಹಮ್ಮ, ಚಿಕ್ಕಮ್ಮಾ"

"ಅಕ್ಕನ ಮಗ ರಾಮನನ್ನು ಚಿಕ್ಕಂದಿನಿಂದಲೂ ನಾನು ನೋಡಿಲ್ಲ; ಕುಮಾರ ರಾಮನು ಬಂದರೆ ಮುತ್ತಿನ ಚಂಡನ್ನು ಕೊಡುವೆನು. ಯಾರ ಚಂಡನ್ನು ಯಾರಿಗೆ ಕೊಡಲಿ; ನಾನು ಮುತ್ತಿನ ಚಂಡನ್ನು ನಿನಗೆ ಕೊಟ್ಟೆನಾದರೆ ನಿಮ್ಮಿಬ್ಬರಿಗೂ ಹೋರಾಟ ಬರಬಹುದು. ರಾಮನಿಗೇನು ನಾಯಕತನ ವಾಗಿರುವುದೋ! ಯೌವನದ ಮದವೋ! ರಾಮನಿಗೆ ತಾನು ನೇಮಿಯೊಡನೆ ಕಾದಿದೆನೆಂಬ ಗರ್ವವೋ? ನೀವು ಚಿಕ್ಕವರಿರುವಾಗ ನನ್ನ ಸಂಗಡ ಆಡಿ ಉಂಡು ಈಗ ನೀವು ಸೊಕ್ಕಬಹುದೇ! ನಾನು ನಿಮಗೆ ಚಿಕ್ಕಮ್ಮನಲ್ಲವೇ? ಕಾಟಣ್ಣ? ನೀವು ನನಗೆ ಮಕ್ಕಳಲ್ಲವೇ" ಎಂದು ಠಕ್ಕು ಮಾತನಾಡುತ್ತ ಕಣ್ಣು ತುಂಬಾ ಹುಸಿಕಂಬನಿಯನ್ನು ತಂದಳು.

ಇದನ್ನು ನೋಡಿ ಕಾಟಣ್ಣನು ಮರುಗಿ ಚಿಕ್ಕಮ್ಮನ ಪಾದಕ್ಕೆ ನಮಸ್ಕರಿ ಸಮಾಧಾನಮಾಡಿ ರಾಮನಿಗೆ ಎಲ್ಲ ಸಮಾಚಾರವನ್ನೂ ತಿಳಿಸುವುದಾಗಿ ಹೇಳಿ, ಮೆಲ್ಲನೆ ಅಲ್ಲಿಂದ ಹೊರಟು ಬಂದು ರಾಮನಿಗೆ ತಿಳಿಸಿದನು.

ರಾಮನು ಹಳಬನಾದ ಬಲ್ಲುಗನನ್ನು ಕರೆದು ರತ್ನಮ್ಮನ ಮನೆಗೆ ಹೋಗಿ ಪ್ರಾರ್ಥಿಸಿ ಚಂಡನ್ನು ತೆಗೆದುಕೊಂಡುಬಾ ಎಂದು ಹೇಳಲು, ಬಲ್ಲುಗನು ಒಡೆಯರ ಮಾತಿನಂತೆ ರತ್ನಮ್ಮನ ಮನೆಗೆ ಬೇಗ ಬಂದು ಪರನಾರಿಯರ ಸಹೋದರ ರಾಮನ ಚಂಡನ್ನು ಬೇಡಿದನು.

"ಬಿರುದಾಂಕಿತನ ಊಳಿಗ ನಿನಗೆ ಸಲ್ಲುವುದು. ಆದರೆ ತಾಯಿಯ ಮನೆಗೆ ಮಗನೇ ಬಂದು ಚಂಡನ್ನು ಕೇಳಲು ಅನ್ಯಾಯವೇನು? ರಾಮ

ನನ್ನೇ ಇಲ್ಲಿಗೆ ಕಳುಹು ಹೋಗು” ಎಂಬ ರತ್ನಾಜಿಯ ಮಾತನ್ನು ಕೇಳಿ, ಬಲ್ಲುಗನು ರಾಮನ ಬಳಿಗೆ ಹೋಗಿ ರಾಮನೇ ಹೋದಲ್ಲದೆ ಚಂಡನ್ನು ರತ್ನಾಜಿಯು ಕೊಡುವುದಿಲ್ಲವೆಂಬ ಮಾತನ್ನು ಬಿನ್ನೈಸಿದನು.

‘ವಿಧಿಯು ಬೆನ್ನ ಬಿಡದು, ಮುನ್ನಿನ ಸುಕೃತದ ಫಲವು ಕಡಿಮೆಯಾಗಿದೆ’ ಎಂದು ಹೇಳಿ ರಾಮನು ಕಾಟಣ್ಣನ ಬುದ್ಧಿವಾದದಂತೆ ತನ್ನ ಅಲಂಕಾರವನ್ನೆಲ್ಲ ತೆಗೆದನು, ಹೆಸರುಳ್ಳರಾಯರ ಗಂಡನೆಂಬ ಕುಸುರಿಯ ಪೆಂಡೆ, ಭೂಮಿಯಲ್ಲಿನ ರಾಯರಗಂಡನೆಂಬ ಹೇಮ ಪದಕ, ಅಷ್ಟ ದಿಕ್ಕಿನ ರಾಯರ ಗಂಡನೆಂಬ ಸುತ್ತಿದ ಚಿಮ್ಮುರಿ, ಕನ್ನೋಜಿರಾಯರಗಂಡನೆಂಬ ಹೊನ್ನುಂಗುರ, ಮಲೆತರಾಯರಗಂಡನೆಂಬ ರನ್ನ ಪದಕ, ದಂಡೆತ್ತಿಬರುವರಾಯರಗಂಡನೆಂಬ ಕಾಲಪೆಂಡೆಯ ದಂಡೆಹಾರ, ರನ್ನ ಕನ್ನಡಿ, ನಡುವಿನುಡದಾರ, ರನ್ನದ ನಾಮ ಮುಂತಾದ ಆಭರಣಗಳನ್ನು ತೆಗೆದು ಅಣ್ಣನ ಕೈಗೆಕೊಟ್ಟು ನಮಸ್ಕಾರ ಮಾಡಿ ಹೊರಟನು.

‘ಸಾಗರಗಂಭೀರ ನಾಗಭೂಷಣನಂದಿಕೇಶ ಸಲಹು, ಜಟ್ಟಂಗೀಶ ಸಲಹು’ ಎಂದು ದೇವರನ್ನು ಪ್ರಾರ್ಥಿಸುತ್ತ ಎಡದ ಕಾಲೊಳಗೆ “ಪರದಾರ ಸೋದರ” ವೆಂಬ ಕಡಗ ಧರಿಸಿ ರಾಮನು ಬರುತ್ತಿದ್ದನು. ಧರ್ಮದೇವತೆ ರಾಮನ ಬೆನ್ನುಹಿಡಿದಿದ್ದಳು. ರಾಮನು ಅರಮನೆಯ ಬಳಿಗೆ ಬರುವ ವೇಳೆಗೆ ಬಾಗಿಲು ಕಾಯುತ್ತಿದ್ದ ಗೊಲ್ಲರು ಎದ್ದು ಕೈಮುಗಿದು “ಬನ್ನಿ ಕುಳ್ಳಿರಿ” ಎಂದು ಮರ್ಯಾದೆ ಮಾಡಿದರು. ಅವರಿಗೇ ಕುಳ್ಳಿರಿ ಎಂದು ಮಾರುಹೇಳಿ ರಾಮನು ಒಳಬಾಗಿಲನ್ನು ಹೊಕ್ಕು ಚಿನ್ನದ ಉಪ್ಪರಿಗೆಗೆ ಬರುತ್ತಿರುವುದನ್ನು ಕಂಡು ರತ್ನಾಜಿಯು ಆನಂದಭರಿತಳಾಗಿ ಸಂಗಿಗೆ ಕಣ್ಣಸನ್ನೆಯನ್ನು ಮಾಡಿದಳು.

ಅಲ್ಲಿ ತೂಗುಹಾಕಿದ್ದ ಚಿನ್ನದ ಪಂಜರದಲ್ಲಿದ್ದ ಅರಗಿಳಿಯು ಕುಮಾರ ರಾಮನನ್ನು ನೋಡಿ ಬೆರಗಾಗಿ ನುಡಿಯಿತು:

“ಎಲೆ ಪಾಪಿ! ಕಂಪಿಲರಾಯನಿಲ್ಲದ ಅರಮನೆಗೆ ಬಂದ ನೀನಾರು ? ಕಂಪಿಲರಾಯನರಸಿಯೊಡನೆ ನಿನಗೆ ಸರಸವೆ ? ನಮ್ಮಕ್ಕ ಅರಸಿಯೊಡನೆ ಹೇಳಿ ನಿನ್ನ ತಲೆಯನ್ನು ಬೆಸೆಕಟ್ಟಿಸುವೆನು” ಹೀಗೆ ಹೇಳಿದ ಅರಗಿಳಿಯ ಮಾತನ್ನು ಕೇಳಿ ರಾಮನು ಅಲ್ಲಿಯೇ ನಿಂತು,

“ಎಲೋ! ಗಿಳಿರಾಮಾ! ನನ್ನನ್ನು ಮರತೆಯಾ ? ನಾನು ರಾಮು

ನೆಂಬುದನ್ನು ಅರಿಯೆಯಾ? ಹುಳಿಯಾರಿನ ಅರಸು ಮಾರಿಗೊಂಡನ ಮೇಲೆ ಧಾಳಿಮಾಡಿದಾಗ, ನಿನ್ನನ್ನು ಆ ಅರಸನಿಂದ ಕಪ್ಪವಾಗಿ ತೆಗೆದುಕೊಂಡು ಬಂದ ರಾಮ ನಾನೆಂಬುದನ್ನು ಮರೆತೆಯಾ? ನಾನು ಕಂಪಿಲರಾಯನ ಕುಮಾರ" ಎಂದು ನುಡಿದನು,

"ಚೆನ್ನಿಗರಾಮನು ಇಲ್ಲಿಗೆ ಬರಬಹುದೆ? ನೀನು ಮನ್ಮಥರೂಪನು. ಏನುಕಾರಣ ಬಂದೆ ಅರಸನಿಲ್ಲದ ಅಂತಃಪುರಕ್ಕೆ?" ಎಂದು ಗಿಳಿ ನುಡಿಯಿತು.

"ನಾನು ಮನ್ನೆಯರ ಸಂಗಡ ಮುತ್ತಿನ ಚಂಡನ್ನು ಆಡುತ್ತಿರಲು, ಲಗ್ಗೆ ಹೊಡೆದಾಗ ಚಂಡು ಹಾರಿಬಂದು, ಉಪ್ಪರಿಗೆಯನ್ನು ದಾಟಿ ಚಿಕ್ಕಮ್ಮನ್ನ ಅರಮನೆಯಲ್ಲಿ ಬೀಳಲು ಹೆತ್ತ ತಾಯನ್ನು ಕೇಳ ಬಂದಿರುವೆನು"

"ಅಯ್ಯೋ ರಾಮ, ಇದಕ್ಕಾಗಿ ಬಂದೆಯಾ? ಆ ಚಂಡು ನಿನ್ನ ಜೀವಕ್ಕೆ ಮೂಲ. ನಾನು ನಿನಗೆ ಕೈಮುಗಿಯುತ್ತೇನೆ. ದಯೆಯಿಟ್ಟು ಹಿಂದಕ್ಕೆ ತಿರುಗು, ಬಿನ್ನವಿಸಿಕೊಳ್ಳುತ್ತೇನೆ. ಅಂಥ ಸಾವಿರ ಚಂಡು ಸಂಪಾದಿಸಬಹುದು. ನಿನ್ನನ್ನು ಹೋಲುವಂಥ ಗಂಡುಗಲಿಯನ್ನು ಕಾಣೆ; ವ್ಯಥೆಗೊಳ್ಳದೆ ಹಿಂದಕ್ಕೆ ತಿರುಗು"

"ರತ್ನಾಜಿಯು ವಿರಹದಿಂದ ನಿನ್ನನ್ನು ಸೆಳೆಯಲು ಪ್ರಯತ್ನಿಸುತ್ತಿದ್ದಾಳೆ. ಅವಳ ಯತ್ನಕ್ಕೆ ನೀನು ಒಳಗಾಗಬೇಡ, ಎಚ್ಚರಿಕೆಯಿಂದಿರುವಾಗಲೇ ಹಿಂದಕ್ಕೆ ಹೋಗುವುದು ಉತ್ತಮ. ಮೊನೆಗಾರನೆಂಬ ಸತ್ವದಿಂದ ರತ್ನಾಜಿಯ ಮನೆಯನ್ನು ಹೊಗಬೇಡ. ದೇವರಾಣೆ, ಹಿಂದಕ್ಕೆ ತಿರುಗು. ನಾನು ಇದುವರೆಗೂ ನಿನ್ನ ಮುಖವನ್ನು ಕಂಡಿರಲಿಲ್ಲ, ಈ ದಿನವೇ ನಿನ್ನನ್ನು ಮೊದಲು ನೋಡಿದುದು. ಕಂದರ್ಪರೂಪನಾದ ರಾಮನೆ, ದಯಮಾಡಿ ಹಿಂದಕ್ಕೆ ತಿರುಗು" ಎಂದು ಹೇಳಿದ ಗಿಳಿಯ ಮಾತನ್ನು ಕೇಳಿ ನೊಂದವನಾಗಿ,

'ಇಂದುಧರನೆ! ಜಟ್ಟಂಗಿ ರಾಮೇಶ, ನನಗೆ ಮುಂದೊದಗುವ ಸಂಕಟವನ್ನು ಪರಿಹರಿಸು' ಎಂದು ದೇವರನ್ನು ಧ್ಯಾನಿಸಿ, 'ವಿಧಿವಿಲಾಸವನ್ನು ಮೀರಲು ಯಾರಿಂದಲೂ ಆಗದು. ಪ್ರಾಪ್ತವಾಗುವ ಕಷ್ಟಗಳನ್ನು ಸಹಿಸಲು ಸಿದ್ಧನಾಗಿರುವೆನು. ಮುಂದಕ್ಕೆ ಇಟ್ಟಅಡಿಯನ್ನು ಹಿಂದಕ್ಕೆ ತೆಗೆಯುವವನಲ್ಲ ನಾನು ನಂದಿವಾಹನನೆ ಗತಿ' ಎನ್ನುತ್ತ ರಾಮನು ಚಿಂತಿಸುತ್ತ ಬರುತ್ತಿರಲು, ಅಲ್ಲಿ ರತ್ನಾಜಿಯ ಹಡಪದ ಸಂಗಿಯು ನಿಂತಿರುವುದನ್ನು ಕಂಡನು.

ಸಂಗಿಯು ರಾಮನಿಗೆ ದಂಡಪ್ರಣಾಮವನ್ನು ಮಾಡಿ ಅವನ ಬರುವಿಕೆಯ ಕಾರಣವನ್ನು ವಿಚಾರಿಸಿದಳು.

"ನಾನು ಚಂಡಾಡುತ್ತಿದ್ದಾಗ ಚಂಡು ನಿಮ್ಮ ಅರಮನೆಗೆ ಬಂದು ಬಿದ್ದಿತು. ಅದನ್ನು ಕೇಳಿ ತೆಗೆದುಕೊಂಡು ಬರಲು ಕಾಟಣ್ಣನನ್ನು ಕಳುಹಿಸಿದೆನು, ಹಳೆಯ ಬಲ್ಲುಗನನ್ನು ಕಳುಹಿಸಿದೆನು. ಅದರೆ ನೀವು ಚಂಡನ್ನು ಕೊಡದೆ ನಮ್ಮನ್ನು ಬಳಲಿಸಿದಿರಿ. ಇದು ನಿಮಗೆ ಯೋಗ್ಯವಾದುದಲ್ಲ. ಆದರೆ ಅರಮನೆಯಲ್ಲಿರುವ ಚಂಡನ್ನು ನಾವು ಮುಟ್ಟುವುದು ಯೋಗ್ಯವಲ್ಲ" ಎಂದು ನುಡಿಯಲು ಸಂಗಿಯು,

"ಆ ಚಂಡು ರತ್ನಮ್ಮನ ಬಳಿ ಇರುವುದು. ನೀನೇ ರತ್ನಮ್ಮನನ್ನು ಕೇಳು" ಎಂದು ಹೇಳಿದ ಮಾತನ್ನು ಕೇಳಿ ಮನಸ್ಸಿನಲ್ಲಿ ನೊಂದುಕೊಂಡು, ದೇವರನ್ನು ಸ್ಮರಿಸುತ್ತ ಅವನು ಮುಂದಕ್ಕೆ ನಡೆದು ರತ್ನಾಜಿಯನ್ನು ಕಂಡನು.

ರತ್ನಾಜಿಗೆ ರಾಮನು ಕೈಮುಗಿದು ನಮಸ್ಕರಿಸಿ,

"ನನ್ನ ತಾಯಿ ಹರಿಯಮ್ಮನೋಪಾದಿಯಲ್ಲಿ ನೀನು ನನಗೆ ಹರುಷದಿಂದ ಚಂಡನ್ನು ಕೊಡಮ್ಮ, ಚಿಕ್ಕಮ್ಮ" ಎಂದು ಪ್ರಾರ್ಥಿಸಿದನು. ರತ್ನಾಜಿಯು ಚಂದ್ರನನ್ನು ಹೋಲುವ ರಾಮನನ್ನು ಕಂಡು,

"ಕಂದ ರಾಮ, ಬಾ. ನೀನು ಚಂಡನ್ನಾಡಿ ದಣಿದಿರುವೆ. ಮಾಣಿಕ್ಯದಂತೆ ಹೊಳೆಯುವ ಗದ್ದುಗೆಯನ್ನು ಹಾಕಿರುವ ಮಂದಿರದೊಳಕ್ಕೆ ಬಂದು ಕುಳಿತುಕೊ" ಎಂದು ಕರೆದಳು.

"ಈಗ ಚಂಡು ಇಲ್ಲದೆ ಆಟವು ನಿಂತಿರುವುದು; ಆದ್ದರಿಂದ ಚಂಡನ್ನು ಕೊಡಮ್ಮ".

ರತ್ನಾಜಿಯ ಮೈಯುಬ್ಬಿ, "ನಿಮ್ಮ ಹೆತ್ತ ತಂದೆಯ ಮಂಚದ ಮೇಲೆ ಮುತ್ತಿನ ಚಂಡು ಇಟ್ಟಿದೆ ಅದನ್ನು ತೆಗೆದುಕೋ" ಎಂದು ಹೇಳಿದಳು.

ಚಿಕ್ಕಮ್ಮನ ನುಡಿಯನ್ನು ಕೇಳಿ ಸೆಜ್ಜೆಯ ಗೃಹಕ್ಕೆ ಹೆಜ್ಜೆಯನ್ನಿಟ್ಟು ಗುಜ್ಜಾರಿ ಮಂಚದಲ್ಲಿದ್ದ ಮುತ್ತಿನ ಚೆಂಡಿಗೆ ಸಜ್ಜನನಾದ ರಾಮ ಕೈಹಾಕಲು ಅದನ್ನು ತೆಗೆದುಕೊಂಡು ಮುಂದಕ್ಕೆ ಹೋಗದಂತೆ ರತ್ನಾಜಿಯು ರಾಮನ ಮುಂದಲೆಯನ್ನು ಹಿಡಿದು,

"ರಾಮ ನಿನ್ನ ರೂಪಿಗೆ ಮನಸೋತಿರುವೆನು; ನೀನು ಒಲಿದು ನನ್ನನ್ನು ಕಾಪಾಡುವುದು" ಎಂದು ಹೇಳುತ್ತ ಅಕ್ಕರೆಯಿಂದ ರಾಮನನ್ನು ತಬ್ಬಿಕೊಂಡಳು.

"ಚಿಕ್ಕಮ್ಮನಾದ ನೀನು ನನ್ನನ್ನು ಪಡೆದ ತಾಯಿ. ನನ್ನಲ್ಲಿ ನೀನು ಮನಸ್ಸನ್ನಿಡಬಹುದೇ ? ಹರಿಯಮ್ಮನೋಪಾದಿಯಲ್ಲಿ ನೀನು ನನ್ನ ತಾಯಿ

ಯೆಂದು ನಾನು ತಿಳಿದುಕೊಂಡಿರುವೆನು; ನನ್ನ ಕಷ್ಟವನ್ನು ಪರಿಹರಿಸು, ಎಂದು ಬೇಡಿದನು.

"ನೀನು ಕೈಗೆ ಸಿಕ್ಕಿರುವೆ. ನೀನೇ ನನ್ನ ಭಾಗ್ಯದ ನಿಧಿ" ಎಂದು ರತ್ನಾಜಿಯು ಪ್ರೀತಿಯ ಮಾತನ್ನಾಡಿದಳು.

"ನೀನು ನನ್ನ ತಾಯಿ; ನನ್ನನ್ನು ಹಿಡಿದುಕೊಳ್ಳುವುದು ನಿನಗೆ ಸಲ್ಲದು. ನಿರ್ಮಲಚಿತ್ತಳಾಗಿ ನನ್ನನ್ನು ಬಿಟ್ಟುಬಿಡು ತಾಯಿ."

"ಹೂ ಬಾಣದ ಏಟು ಬಲವಾಗಿದೆ; ನನ್ನ ಕೈಗೆ ಸಿಕ್ಕಿರುವ ನಿನ್ನನ್ನು ಎಂದಿಗೂ ಬಿಡಲಾರೆನು. ಹೆಮ್ಮೆಯಿಲ್ಲದೆ ನನ್ನ ಸೇರುವುದು" ಎಂದು ನುಡಿದ ತಾಯಿಯ ಮಾತನ್ನು ಕೇಳಿ ರಾಮನು 'ಹರಹರಾ' ಎನ್ನುತ್ತ ಕಿವಿಯನ್ನು ಮುಚ್ಚಿಕೊಂಡು, ನನ್ನ ಕಷ್ಟವನ್ನು ಪರಿಹರಿಸೆಂದು ಬೇಡಿದನು.

"ರಾಮ, ನೀನು ನನ್ನ ಕನಸಿನಲ್ಲಿ ಬಂದು ಕಾಡುತ್ತಿರುವಿ; ಆದರೆ ಈಗ ಈರೀತಿ ಸುಮ್ಮನಿರುವುದು ಸರಿಯಲ್ಲ. ನೀನು ತಿರಸ್ಕರಿಸುವುದು ಯುಕ್ತವಲ್ಲ. ಮನ್ಮಥರೂಪನಾದ ನೀನು ನನ್ನನ್ನು ಕಾಪಾಡು" ಎಂದು ರತ್ನಾಜಿಯು ಪ್ರಾರ್ಥಿಸಿದಳು.

"ಸಲ್ಲದ ಮಾತುಗಳನ್ನಾಡಬೇಡಮ್ಮ, ಚಿಕ್ಕಮ್ಮ. ನನ್ನ ಮುಂದಲೆಯನ್ನು ಬಿಡು; ನಾನು ನಿನಗೆ ಮಗನಲ್ಲವೆ? ನೀನು ಈ ರೀತಿ ಮತಿಗೆಡಬಾರದು" ಎಂದು ರಾಮನು ವಿನಯದಿಂದ ನುಡಿದನು.

"ಸೂಲದ ಹಬ್ಬದ ದಿವಸ ನಿನ್ನನ್ನು ಕಂಡೆನು. ಅಂದೇ ನಿನ್ನನ್ನು ಮೋಹಿಸಿದೆನು. ಭೂಲೋಕದಲ್ಲಿಯೇ ನಿನ್ನಂಥ ಚೆಲುವನು ಯಾರೂ ಇಲ್ಲ. ಬಾಲೆ ನಿನ್ನನ್ನು ಬಯಸಿ ಬಂದರೆ ಒಲ್ಲೆನೆಂದು ಹೇಳುವುದು ನಿನಗೆ ಉಚಿತವೆ? ಚಿನ್ನವು ತಾನಾಗಿ ಕೈಸೇರಿದರೆ ಅದನ್ನು ತ್ಯಜಿಸುವವರು ಭೂಲೋಕದಲ್ಲಿ ಯಾರೂ ಇಲ್ಲ. ಹೆಂಗಸು ನಿನ್ನಲ್ಲಿ ಮನವಿಟ್ಟು ಮೋಹಿಸಿ ಬಂದರೆ ಹೆಣ್ಣಿನ ಆಸೆಯೆ ಬೇಡವೆಂದು ಹೇಳುವುದುಂಟೇ?" ಎಂದು ಮೋಹದಿಂದ ಹೇಳಿ ಕಣ್ಣೀರನ್ನು ಸುರಿಸಿ ಕೈಯಿಂದ ಒರಿಸಿಕೊಳ್ಳುತ್ತ ಉಂಗುಷ್ಟದಿಂದ ನೆಲವನ್ನು ಕೆರೆಯುತ್ತ,

"ನನ್ನಲ್ಲಿ ನೀನು ಮನಸ್ಸಿಟ್ಟು ಒಂದು ಹೊತ್ತಿನ ಭೋಗವನ್ನು ಸಲ್ಲಿಸಿ ನನ್ನನ್ನು ಕಾಪಾಡು; ಮುತ್ತು, ಮಾಣಿಕ, ರತ್ನ ಭಂಗಾರವನ್ನು ಕೊಡುವೆನು. ಬೇಗ ನನ್ನ ಕೂಡು" ಎಂದು ಅಂಗಲಾಚಿ ಬೇಡಿಕೊಂಡಳು. ರಾಮನು

ಉತ್ತರವನ್ನು ಕೊಡದಿರಲು, ಅವನನ್ನು ದೃಷ್ಟಿಸಿ ನೋಡಿ ತನ್ನ ಬಟ್ಟೆ ಕುಚವನ್ನು ರಾಮನಿಗೆ ಕಾಣುವಂತೆ ಮಾಡಿ ಅವನು ಎದೆಗೆಡುವಂತೆ ಮಾಡಿದಳು.

"ರಾಮ, ನೀನು ನನ್ನನ್ನು ಒಲಿದರೆ ಹೊಸ ಮಲೆಯ ದುರ್ಗವನ್ನು ನಿನ್ನ ವಶಮಾಡುವೆನು. ದೆಸೆದೆಸೆಯ ಮಾನ್ಯೆಯರು ನಿನ್ನನ್ನು ಸೇವಿಸುವಂತೆ ಮಾಡುವೆನು. ಮುದಿ ಕಂಪಿಲನನ್ನು ವಿಷವನ್ನಿಟ್ಟು ಕೊಲ್ಲಿಸುವೆನು. ಮುಂದಿನ ಪಟ್ಟವು ನಿನಗೆ ಸಿದ್ಧವು" ಎಂದು ಪರಿಪರಿಯಾಗಿ ಆಶೆ ತೋರಿಸಿದಳು.

"ಈ ಭೂತಳದಲ್ಲಿ ತಾಯಿಯು ಮಕ್ಕಳನ್ನು ಬಯಸಿದ ಪಾತಕಕ್ಕೆ ನೀನು ಒಳಗಾಗಬಹುದೇ? ನೀನು ಮನಸ್ಸಿನಲ್ಲಿಯೇ ಯೋಚನೆ ಮಾಡಿನೋಡು. ಈ ದುರ್ಗುಣವು ನಿನಗೆ ನೀತಿಯೇ? ಇಂಥ ಮಾತುಗಳನ್ನಾಡಬಾರದು ಕೈಬಿಡಮ್ಮಾ" ಎಂದು ರಾಮನು ಬೇಡಿಕೊಂಡನು.

ರತ್ನಾಜಿಯು "ವಿರಹದಿಂದ ಮತಿಗೆಟ್ಟಿರುವೆನು. ಇನ್ನು ವಿರಹದ ಬಾಧೆಯನ್ನು ಸೈರಿಸಲಾರೆನು. ಮನ್ಮಥರೂಪ ರಾಮ! ನನಗೆ ಒಂದು ಗಳಿಗೆ ಯಾದರೂ ಸುಖವನ್ನು ಕೊಟ್ಟು ಕಾಪಾಡು; ಇಲ್ಲವಾದರೆ ನನ್ನನ್ನು ಕೊಂದು ಹೋಗು" ಎಂದು ವಿನಯದಿಂದ ಮಾರ್ನುಡಿದಳು.

"ಬಲ್ಲವರು ನೀತಿಗೆಟ್ಟು ಅಲ್ಪಸುಖಕ್ಕೆ ಕಾತರಪಡರು. ಇದನ್ನು ಕೇಳಿದರೆ ಲೋಕದ ಜನರು ಓಕರಿಸಿ ನಿಂದಿಸುವರು; ನನ್ನನ್ನು ಕೈಬಿಡಮ್ಮಾ".

"ರಾಮ, ಲೋಕದ ಬೆದರಿಕೆಗೆ ಅಂಜದಿರು. ನಿನ್ನನ್ನು ಹೆತ್ತವಳು ರತ್ನಮ್ಮನೆಂದೂ, ಸಾಕಿದವಳು ಹರಿಯಮ್ಮನೆಂದೂ ಲೋಕವರಿಯುವಂತೆ ಡಂಗುರವನ್ನು ಹೊಯಿಸಿ ಭೂಕಾಂತ ಕಂಪಿಲರಾಯನು ಮೆಚ್ಚುವಂತೆ ಮಾಡುವೆನು."

"ಮಾತೆಯೇ, ಬೇಡ ಬೇಡ ಈ ಅಪಕೀರ್ತಿ; ನನ್ನನ್ನು ಬಿಟ್ಟು ಚಂಡನ್ನು ಕೊಡಮ್ಮಾ. ಮನ್ನೆಯರು ನನ್ನ ದಾರಿಯನ್ನು ನೋಡುತ್ತಿರುವರು. ನಾನು ಚಂಡನ್ನು ತೆಗೆದುಕೊಂಡು ಅವರ ಬಳಿಗೆ ಹೋಗುವೆನು."

"ಚಂಡಿನ ಮಾತು ಹಾಗಿರಲಿ ಚೆಲುವಾ, ನನ್ನನ್ನು ನಿನ್ನ ಹೆಂಡತಿಯನ್ನಾಗಿ ಮಾಡಿಕೋ."

"ಪಾಪದ ಮಾತನ್ನು ಕೇಳಿ ಸಹಿಸಲಾರೆನು! ಹೇ ಜಟ್ಟಂಗಿರಾಮೇಶ, ನನಗೆ ಈ ಆಪತ್ತನ್ನು ತಂದೆಯಾ! ತಾಯೆ! ನೀನು ಈ ನೀಚಬುದ್ಧಿಗೆ ಮನಗೊಡದಿರಮ್ಮಾ; ಹೆಚ್ಚು ಮಾತುಗಳೇಕೆ? ತಾನು ಮದುವೆಯಾದ ಲಲನೆ

ಕರುಣಿಸಬೇಕು." ಎಂದು ಬೇಡಿಕೊಂಡ ಭಕ್ತಿಗೆ ಶಿವನು ಮೆಚ್ಚಿ ಬೇಡಿದ ವರಗಳನ್ನು ಮತ್ತು ನೆತ್ತಿಯ ಮೇಲಿನ ಮಲ್ಲಿಗೆ ಪುಷ್ಪವನ್ನು ಪ್ರಸಾದವಾಗಿ ಕರುಣಿಸಿದನು. ಮೃತ್ಯುಂಜಯನು ಕೊಟ್ಟ ಪ್ರಸಾದವನ್ನು ರಾಮನು ಕೈಲಿ ತೆಗೆದುಕೊಂಡು ಮಂಡೆಯಲ್ಲಿ ಧರಿಸಿದನು. ಎಲ್ಲರೂ ಕೂಡಿ ಪ್ರಯಾಣಮಾಡಿ ಕುಮ್ಮಟ ದುರ್ಗವನ್ನು ಬಂದು ಸೇರಿ ತಮ್ಮ ತಮ್ಮ ಮನೆಗೆ ತೆರಳಿದರು.

ರಾಮನು ಉದಯದಲ್ಲೆದ್ದು ತಂದೆತಾಯಿಗಳ ಬಳಿಗೆ ಬಂದು ವಂದಿಸಿ,

"ನಿಮ್ಮ ಅಂತರಂಗವನ್ನು ತಿಳಿದಿರುವೆನು ; ನಾನು ಸೈನ್ಯವನ್ನು ಹೆಚ್ಚಿಸುವುದಕ್ಕೆ ಸಿಟ್ಟನ್ನು ಮಾಡದಿರಿ; ನೀವು ನನಗೆ ಪಟ್ಟಾಭಿಷೇಕ ಮಾಡಿದ ಸಂಗತಿಯು ದಿಲ್ಲಿಗೆ ತಲುಪುವುದು. ಸುಲ್ತಾನನ ಮಗಳು ನನ್ನನ್ನು ಮದುವೆಯಾಗಬೇಕೆಂದು ನೇಮದಿಂದ ಕಾದಿರುವಳು. ಅವಳು ತನ್ನ ತಂದೆಗೆ ಈ ವಿಷಯವನ್ನು ಪರಿಪರಿಯಾಗಿ ಹೇಳಿಕೊಳ್ಳುವಳು. ರಾಮನನ್ನು ಹಿಡಿಯಾಳ ಮಾಡಿ ಹಿಡಿದು ತರಿಸೆಂದು ತಂದೆಯನ್ನು ಬೇಡುವಳು. ಸುಲ್ತಾನನಿಂದ ಆಜ್ಞಾಪ್ರಸಾದ ನೇಮಿಯು ಪುನಃ ದಂಡು ತೆಗೆದುಕೊಂಡು ಬಂದು ನಮ್ಮ ದುರ್ಗವನ್ನು ಮುತ್ತುವನು. ಇದು ಖಂಡಿತ. ನೇಮಿಯನ್ನು ವಧೆಮಾಡದ ಹೊರತು ರಾಜಕಾರ್ಯವು ನಿಲ್ಲುವುದೇ ಇಲ್ಲ. ನಾನು ಪರನಾರೀ ಸಹೋದರನೆಂಬ ಬಿರುದನ್ನು ಧರಿಸಿದ್ದೇನೆ. ಅದನ್ನು ರಕ್ಷಿಸಿಕೊಳ್ಳುವ ಬಗೆಯನ್ನು ಜಟ್ಟಂಗೀಶನೇ ಬಲ್ಲನು." ಎಂದು ಬಿನ್ನಹಮಾಡಿ ಮುಂದಿನ ಕಾರ್ಯವನ್ನು ಮಾಡಲು ಅವರ :ಅಪ್ಪಣೆಯನ್ನು ಹೊಂದಿ ಹಿಂದಿರುಗಿ ಮನೆಗೆ ಬಂದು ಪ್ರೀತಿಯ ಸತಿಯರೊಂದಿಗೆ ಚಪ್ಪರಮಂಚದಲ್ಲಿ ಸುಖಿಸಿ ನಿದ್ರೆಗೈದನು.

## ೧೯

ಒಂದು ದಿನ ರಾಮನು ಒಪ್ಪದಿಂದ ಊಟಮಾಡಿದ ಮೇಲೆ ಶೃಂಗರಿಸಿಕೊಂಡು ನೀಲನನ್ನು ಏರಿ ಬೈಚಪ್ಪ ಮತ್ತು ಮುಖ್ಯ ಮನ್ನೆಯರನ್ನು ಸಂಗಡ ಕರೆದುಕೊಂಡು ಹೊಸಮಲೆ ದುರ್ಗವನ್ನು ಹೊಕ್ಕನು.

ಬಿದ್ದಿದ್ದ ಕೋಟೆಯನ್ನು ಸರಿಪಡಿಸಿ, ಭಂಡಾರವನ್ನು ನೋಡಿಕೊಂಡು ಒಕ್ಕಲಿಗರಿಗೆ ಬುದ್ಧಿವಾದವನ್ನು ಹೇಳಿ ಹೊರಟನು. ಕೆಲವೇ ದಿನಗಳಲ್ಲಿ

ರಾಮನು, ಸಂಚಾರ ಹೊರಟು ಎಲ್ಲ ಗಡಿಗಳನ್ನು ನೋಡಿಕೊಂಡು, ಭದ್ರವನ್ನು ಮಾಡಿದನು. ಬೊಕ್ಕಸ ಕಣಜಗಳನ್ನು ಬಲಿಸಿದನು. ಕೆರೆಗಳನ್ನು ಕಟ್ಟಿಸಿದನು. ಹೂವಿನ ತೋಟಗಳನ್ನು ಹಾಕಿಸಿದನು. ಸೆರೆಯಲ್ಲಿದ್ದವರನ್ನು ಬಿಡಿಸಿದನು. ಹಸಿದು ಬಂದವರಿಗೆ ಅನ್ನವನ್ನಿಡುವ ಏರ್ಪಾಡು ಮಾಡಿದನು.

ಇವನ ರಾಜ್ಯವು ಕೆರೆ, ಕಾಲುವೆ, ಭಾವಿಗಳಿಂದ ರಂಜಿಸುತ್ತಿತ್ತು. ದೇಶದೇಶಗಳಿಂದ ಮಕ್ಕಳುಗಳನ್ನು ಕರೆಸಿ, ತನ್ನ ದೇಶದಲ್ಲಿ ಪ್ರೇಮದಿಂದ ನೆಲಸುವಂತೆ ಅಪ್ಪಣೆಮಾಡಿ ಸುಖದಿಂದ ಬಾಳುವಂತೆ ಪ್ರಜೆಗಳನ್ನು ಮನ್ನಿಸಿದನು. ಕೊಟ್ಟ ಮಾತಿಗೆ ತಪ್ಪುವುದಿಲ್ಲವೆಂದೂ ಗಟ್ಟಿಯಾಗಿ ದುಡಿದು ಸುಖದಿಂದ ಇರುವಂತೆ ಪರದೇಶದಿಂದ ಬಂದವರಿಗೆ ಭರವಸೆ ಕೊಟ್ಟನು. ಅಲ್ಲಲ್ಲಿ ಅನ್ನಛತ್ರಗಳನ್ನೂ, ಅರವಟ್ಟಿಗೆಗಳನ್ನೂ, ಕಟ್ಟಿಸಿ ಮಠ, ಮಾನ್ಯ, ಅಗ್ರಹಾರಗಳನ್ನು ನಿರ್ಮಿಸಿ ಬ್ರಾಹ್ಮಣರಿಗೆ ಕೊಟ್ಟು, ರಾಮನು ಅತ್ಯಂತವಾದ ಹರ್ಷದಿಂದ ರಾಜ್ಯವನ್ನು ಪರಿಪಾಲಿಸುತ್ತಿದ್ದನು.

ತಂದೆ ಮಕ್ಕಳು ಸುಖಸಂಕಥಾ ವಿನೋದದಿಂದ ರಾಜ್ಯವನ್ನು ಪರಿಪಾಲಿಸುತ್ತ ಇರುವಾಗ, ದಿಲ್ಲಿಯ ಸುಲ್ತಾನನು ಕುಮ್ಮಟದ ದೊರೆಗಳಂತೆ ಕೀರ್ತಿಯುತರಾದ ರಾಜರುಗಳು ಯಾರೂ ಇಲ್ಲವೆಂಬ ಸುದ್ದಿಯನ್ನು ಕೇಳಿದನು. ಸುಲ್ತಾನನ ಕುಮಾರಿಯು ರಾಮನ ಬಿರುದುಗಳನ್ನು ಸಂತೋಷಿತಳಾಗಿ ತನ್ನ ತಂದೆಯ ಬಳಿಗೆ ಬಂದು, ತನ್ನ ಯೌವನವು ಮೀರಿಹೋಗುತ್ತಿರುವುದೆಂದೂ, ನೇಮಿಯನ್ನು ಕಳುಹಿಸಿ ರಾಮನನ್ನು ತರಿಸಬೇಕೆಂದೂ, ಬಿನ್ನೈಸಿಕೊಂಡಳು. ಸುಲ್ತಾನನು ಮಗಳ ಮಾತನ್ನು ಕೇಳಿ ಮನ್ನಿಸಿ ಚಿಂತೆಗೊಳಗಾದನು.

ಸುಲ್ತಾನನ ಮಂತ್ರಿಯಾದ ನೇಮಿಖಾನನು ರಾಮನ ಚಿತ್ರಪಟವನ್ನು ಸುಲ್ತಾನನ ಕುಮಾರಿಗೆ ಕೊಟ್ಟನು. ಅದನ್ನು ಕಂಡ ಕೂಡಲೇ ಬಾಬಮ್ಮನು ಮೂರ್ಛೆ ಹೋದಳು. ಸ್ವಲ್ಪ ಹೊತ್ತಿನ ಮೇಲೆ ಸಖಿಯರ ಉಪಚಾರದಿಂದ ಮೂರ್ಛೆ ತಿಳಿದೆದ್ದು ವಿರಹದಿಂದ ತವಕಪಡುತ್ತಿದ್ದಳು. ಸುಲ್ತಾನನು ಮಗಳ ಚಿಂತಾಜನಕವಾದ ಅವಸ್ಥೆಯನ್ನು ಕೇಳಿ ಮನನೊಂದವನಾಗಿ ಕುಮಾರಿಯ ಅಭಿಪ್ರಾಯವನ್ನು ಕೇಳಿದನು. ಬಾಬಮ್ಮನು ತನ್ನ ಮನವನ್ನು ಸೂರೆಗೊಂಡ ಕಮ್ಮಟದರಸು ರಾಮನ ಚಿತ್ರಪಟವನ್ನು ತಂದೆಗೆ ತೋರಿಸಿ ರಾಮನನ್ನು ವಿವಾಹವಾಗದ ಹೊರತು ತನ್ನ ಮನಸ್ಸು ತಣಿಯದೆಂದು ಹೇಳಿ ಮನಸ್ಸಿನಲ್ಲಿ ನೊಂದು ಮಲಗಿದಳು.

ಸತ್ತುಹೋದನೆಂದು ತಿಳಿದಿದ್ದ ರಾಮುನನ್ನು ಪುನಃ ಕರೆಸಿ ನಮ್ಮ ಸೈನ್ಯದೊಡನೆ ಕಾದಿ ಗೆಲಿಸಿ ತಂದೆತಾಯಿಗಳಿಗೆ ಸಂತೋಷವನ್ನುಂಟುಮಾಡಿದ ಮಂತ್ರಿಯ ಜಾಣತನಕ್ಕೆ ಸುಲ್ತಾನನು ಮೆಚ್ಚಿ, ಅಂಥ ಚತುರ ಬುದ್ಧಿಯ ಪ್ರಧಾನರು ತನಗಿಲ್ಲವೆಂದು ಕೋಪದಿಂದ ನೇಮಿಯನ್ನು ನಿಂದಿಸಿದನು. ವಿರಹತಾಪದಿಂದ ಸೊರಗಿ ಮಲಗಿದ್ದ ಸುತೆಯನ್ನು ಸಮಾಧಾನ ಮಾಡಿ ಹೊರಚಾವಡಿಗೆ ಬಂದು ನೇಮಿಖಾನನನ್ನು ಕರೆಸಿದನು.

ಪುನಃ ಕುಮ್ಮಟ ದುರ್ಗಕ್ಕೆ ಸೈನ್ಯ ಸಮೇತ ಹೋಗಿ ರಾಮುನನ್ನು ಸೆರೆಹಿಡಿದು ತರಬೇಕೆಂದು ಆಜ್ಞಾಪಿಸಲು ಮಂತ್ರಿಯು ಸುಲ್ತಾನನಿಗೆ,

"ಕಂಪಿಲರಾಯನು ತನ್ನ ಮಗನಾದ ರಾಮನಿಗೆ ದೊರೆತನವನ್ನು ಕೊಟ್ಟು ಪಟ್ಟಕಟ್ಟಿದನು. ನಮ್ಮ ಭಾರಿ ಸೈನ್ಯವನ್ನು ರಾಮನು ನಂಬುಗೆಯ ಬೇಡರ ಸಹಾಯದಿಂದ ಕಡಿದು ರಕ್ತದ ಕಾಲುವೆಯನ್ನು ಹರಿಸಿದನು. ಕಂಪಿಲರಾಯನ ಮಗನು ಅಂತಹ ಧಿಟ್ಟನಾಗಿರುವನು. ಎಂಟು ದಿಕ್ಕುಗಳಲ್ಲೂ ಅವನ ಸಮಾನರಿಲ್ಲ.

"ಭೂಮಿಯಲ್ಲೇ ಹೆಸರುವಾಸಿಯಾಗಿದ್ದ ಪ್ರತಾಪರುದ್ರರಾಯನು ರಾಮನೆದುರಿಗೆ ನಡುಗಿಹೋದನು. ಅವನನ್ನು ಹಿಡಿಮು ತರುವುದಾಗಿ ಹೇಳಿ ಕದನಕ್ಕೆ ಹೋದವರೆಲ್ಲ ಆವನ ಕೈಗೆ ಸಿಕ್ಕು ಮಡಿದು ಹೋದರು. ಚಿಪ್ಪಗಿರಿಯ ಮೊಗಲನು ಎಪ್ಪತ್ತು ಸಾವಿರ ಕುದುರೆಯುವರೊಂದಿಗೆ ರಾಮುನೊಡನೆ ಕದನಕ್ಕೆ ಹೋಗಿ ಮಡಿದನು. ರಾಮನು ಆ ನಾಡ ಕಡುಗಲಿಯಾದ ಜಗದಪ್ಪರಾಯನನ್ನು ಸೋಲಿಸಿ, ಅವನ ಮಗಳನ್ನು ಮದುವೆಯಾದನು. ರಾಮನೆದುರಿಗೆ ಒಂದು ನಿಮಿಷವೂ ಯುದ್ಧಮಾಡುವ ವೀರರನ್ನೇ ಕಾಣೆನು. ಹೀಗಿರುವಲ್ಲಿ ನನ್ನ ಗತಿಯೇನು ?

"ಕುಮ್ಮಟ ದುರ್ಗವು ಸುತ್ತಲೂ ತರುಗಿರಿಗಳಿಂದ ಆವರಿಸಲ್ಪಟ್ಟಿರುವುದು. ಐಶ್ವರ್ಯದಿಂದ ತುಂಬಿ ತುಳುಕಾಡುತ್ತಿದೆ. ಮುಗಿಲ ಸೆರಗಿನಂತೆ ಮಿಗಿಲಾದ ದುರ್ಗವು ವರ್ಣನಾತೀತವಾಗಿರುವುದು. ಇನ್ನು ಮೇಲೆ ಕುಮ್ಮಟ ದುರ್ಗಕ್ಕೆ ಕಾಳಗವಾಡಲು ಸುಲ್ತಾನರ ದಂಡು ಹೋಗಬಾರದು. ಹಿಂದೂರಾಯನಾದ ರಾಮನು ಅಷ್ಟು ಬಲ್ಲಿದನಾಗಿದ್ದಾನೆ. ಯುದ್ಧಮಾಡಲು ನನ್ನನ್ನು ಎಲ್ಲಿಗಾದರೂ ಕಳುಹಿಸಬಹುದು. ಆದರೆ ಕುಮ್ಮಟ ದುರ್ಗದ ಅರಸನಾದ ಸೋಗೆ ಕಂಗಳ ರಾಮನ ಮೇಲೆ ಮಾತ್ರ ಕಳುಹಬೇಡ; ಗುಜರಾತಕ್ಕಾದರೂ,

ತೆಲುಗು ರಾಜ್ಯಕ್ಕಾದರೂ, ಮಾಗಧ ಮಲೆಯಾಳರ ಮೇಲಾದರೂ ಕಳುಹಿಸು. ಆದರೆ ಕುಮ್ಮಟ ದುರ್ಗಕ್ಕೆ ಮಾತ್ರ ಬೇಡ. ಉಳಿದ ಹಿಂದೂ ರಾಯರ ಮೇಲೆ ಹೋಗಿ ಯುದ್ಧಮಾಡಬಲ್ಲೆ ; ನಾಗಲೋಕಕ್ಕೆ ಹೋಗೆಂದರೂ ಹೋಗಿ ಕಾದಲು ಸಿದ್ಧನಾಗಿರುವೆನು ; ಕುಮ್ಮಟದುರ್ಗಕ್ಕೆ ಮಾತ್ರ ಹೋಗಲಾರೆನು."

ಎಂದು ನೇಮಿಯು ಹೇಳಿದನು. ಈ ಮಾತನ್ನು ಸುಲ್ತಾನನು ಕೇಳಿ ಚಿಂತೆಗೊಳಗಾದನು.

"ರಾಮನನ್ನು ಹಿಡಿದು ತರುವುದಾಗಿ ಪಂಥವನ್ನು ಮಾಡಿ, ಅವನನ್ನು ತರಲಾರದೆ ಹೋದಿರಿ ; ರಾಮನು ಅಂತಹ ಕಾಲಾಂತಕನೇ ! ಅಲ್ಲಿಗೆ ಹೋದ ವರೆಲ್ಲ ಬಾದೂರಖಾನನನ್ನು ಹಿಡಿದು ತರದೆ ಹಿಂದಕ್ಕೆ ಬಂದಿರುವಿರಿ" ಎಂದು ಮಾತಂಗಿ ಎಂಬ ಮಾದಿಗಗಿತ್ತಿಯು ಸುಲ್ತಾನನ ಮುಂದೆ ಹೇಳುತ್ತ,

"ರಾಮನನ್ನು ಹಿಡಿದು ತರುವೆನು ನನಗೆ ವೀಳೆಯವನ್ನು ಪಾಲಿಸಿರಿ" ಎಂದು ಬಿನ್ನೈಸಿದಳು.

ಸುಲ್ತಾನನು ಈ ಮಾತನ್ನು ಕೇಳಿ, ಹೇಡಿ ಮಂತ್ರಿಯ ಮುಖವನ್ನು ನೋಡಿ,"ಹೆಂಗಸು ರಾಮನನ್ನು ಹಿಡಿದು ತರುವಳು"ಎಂದು ಮೂದಲಿಸಿದನು.

ಮಂತ್ರಿಯು ಮಾದಿಗಗಿತ್ತಿಯನ್ನು ಚೆನ್ನಾಗಿ ಬೈದು "ರಾಮನನ್ನು ಹಿಡಿದು ತರುವೆಯಾ ?" ಎಂದು ಕೇಳಿದನು.

ಮಾತಂಗಿಯು "ಖಂಡಿತವಾಗಿಯೂ ತರುವೆನು"ಎಂದಳು. ಮಂತ್ರಿಯು ಸೋಜಿಗದಿಂದ ಮನಸ್ಸಿನಲ್ಲಿಯೇ ಚಿಂತೆ ಮಾಡುತ್ತಿದ್ದನು.

ಸುಲ್ತಾನನು ಮಾತಂಗಿಗೆ ವೀಳೆಯವನ್ನು ಕೊಟ್ಟು, ರಾಮನನ್ನು ತರ ಬೇಕೆಂದು ಆಜ್ಞೆಮಾಡಿ ನೇಮಿಗೆ ಸೈನ್ಯಸಮೇತ ಮಾತಂಗಿಯೊಡನೆ ಹೊರಡು ವಂತೆ ಹೇಳಿದನು. ಚೆಲುವು ಚೆನ್ನಾರಿ, ಒನಪು ವೈಯಾರಿ, ಬಲುಹಿನ ಮಾನಿನಿ ರನ್ನೆಯಾದ ಮಾತಂಗಿಯು, ಶೃಂಗರಿಸಿದ ಕುದುರೆಯನ್ನು ಏರಿ, ಅದಕ್ಕೆ ಒಪ್ಪುವ ಹೊನ್ನಾಯ ಸರಪಳಿ, ಝುಲ್ಲಿ ಜಮುದಂಡೆಗಳನ್ನು ಧರಿಸಿದಳು. ನೇಮಿಯೊಡನೆ ಒಂಬತ್ತು ಲಕ್ಷ ಕುದುರೆ ಕಾಲಾಳುಗಳು ಸಿದ್ಧವಾಗಲು, ಸುಲ್ತಾನನು ಭೂಮಿಯನ್ನೇ ಸೂರೆಗೊಂಬುವನೋ ಎಂಬಂತೆ ಸಿದ್ಧವಾದ ಸೈನ್ಯವನ್ನು ಕುಮ್ಮಟದುರ್ಗವನ್ನು ಮುತ್ತಲು ಅಪ್ಪಣೆಕೊಟ್ಟು ಕಳುಹಿಸಿದನು.

ತುಂಬಿದ ಓಲಗದಲ್ಲಿ ಮಾತಂಗಿಯು ಎದ್ದು ಸುಲ್ತಾನನ ಪಾದಕ್ಕೆ

ಬಿದ್ದು, ಕಂಪಿಲರಾಯನನ್ನು ಗಾಯಗೊಳಿಸಿ ರಾಮನನ್ನು ಕಟ್ಟಿ ಹಿಡಿದು ತರುವೆನೆಂದು ಜಗತ್ತೇ ಅರಿಯುವಂತೆ ಭಾಷೆ ಮಾಡಿದಳು.

ಕೊಂಕಣ ಮಧ್ಯದೇಶದವಳಾದ ಮಾತಂಗಿಯು ಕುದುರೆಯನ್ನೇರಿ ರಾಮನ ದುರ್ಗವನ್ನು ಹಿಡಿದು ಅವನ ಬಿಂಕವನ್ನು ಮುರಿಯುವುದಾಗಿ ಹೇಳುತ್ತ ನಡೆದಳು. ಹತ್ತುಸಾವಿರ ಕುದುರೆಗಳೊಂದಿಗೆ ಎರಡು ಕಡೆಗಳಲ್ಲಿಯೂ ಛತ್ರಿಗಳನ್ನು ಹಿಡಿಸಿಕೊಂಡು ಪ್ರಯಾಣಮಾಡಿದಳು. ನೇಮಿಯ ದಂಡು ಸಮೀಪದಲ್ಲಿಯೇ ಹಿಂಬಾಲಿಸುತ್ತಲಿತ್ತು. ದಿಲ್ಲಿಯಿಂದ ಕುಮ್ಮಟ ದುರ್ಗಕ್ಕೆ ಆಗುವ ಮುನ್ನೂರು ಅರವತ್ತು ಗಾವುದ ದೂರಕ್ಕೆ ಅಲ್ಲಿಗಲ್ಲಿಗೆ ಅಂಚೆಯನ್ನಿಡಿಸಿ ಮುಂದಕ್ಕೆ ದಾಳಿಯಿಟ್ಟಳು.

ಮಾತಂಗಿಯು ಕಳುಹಿಸಿದ ಮುಂಜಾಣಿ ಕುದುರೆಗಳು ಸಂಜೆಯ ಹಡಗುಗಳನ್ನು ಮಂಜು ಮುಸುಕುವಂತೆ ರಾಮನ ರಾಜ್ಯವನ್ನು ಅಂಜಿಕೆ ಇಲ್ಲದೆ ಒಳ ಹೊಕ್ಕವು. ಎಂದಿಗೂ ಆಗದೆ ಇರುವ ಕಾರ್ಯವನ್ನು ಮಾಡುವುದಾಗಿ ಹೇಳುತ್ತ, ಫೌಜನ್ನು ಕೂಡಿಕೊಂಡು ಪ್ರಯಾಣದ ಮೇಲೆ ಪ್ರಯಾಣ ಮಾಡುತ್ತ ವೇಗವಾಗಿ ರಾಮನ ರಾಜ್ಯಕ್ಕೆ ಬಂದಳು. ಕಂಪಿಲನ ದುರ್ಗವನ್ನು ಮುಟ್ಟಿ, ಅದನ್ನೂ ಸೂರೆಗೊಂಡು ರಾಮನನ್ನು ಎಡಕೈ ಕಟ್ಟಿ ಬಾದೂರನನ್ನು ಹಿಡಿದುಕೊಂಡು ಹೋಗುವುದಾಗಿ ಹೇಳಿಕೊಳ್ಳುತ್ತ, ಸುಲ್ತಾನನ ರಾಜ್ಯದ ಗಡಿಯನ್ನು ದಾಟಿ ರಾಮನ ರಾಜ್ಯವನ್ನು ಹೊಕ್ಕಳು.

## ೨೦

ಈ ರೀತಿ ತನ್ನ ದೇಶವನ್ನು ಹೊಕ್ಕ ದಂಡನ್ನು ರಾಮನು ಕಂಡು ತನ್ನ ತಂದೆಯ ಬಳಿಗೆ ವರ್ತಮಾನವನ್ನು ಕಳುಹಿಸಿ ದಿನದಿನಕ್ಕೆ ಹತ್ತು ಸಾವಿರ ದಂಡನ್ನು ಕಳುಹಿಸುವಂತೆ ಪ್ರಾರ್ಥಿಸಿದನು.

ಭೂಮಿಯು ಬಿರಿವಂತೆ ಬರುತ್ತಿದ್ದ ತುರುಕರ ದಂಡನ್ನು ರಾಮನು ಒಂದುದಿನ ತನ್ನ ಮಾನ್ಯೆಯರೊಂದಿಗೆ ಕೋಡುಗಲ್ಲನ್ನು ಹತ್ತಿ ನೋಡಿದನು. ರಾಮನು ಮನಸ್ಸಿನಲ್ಲಿಯೇ ಸಂತೋಷ ಹೊಂದಿ, ಅರಮನೆಯಲ್ಲಿದ್ದ ತನ್ನ ತಂದೆಗೆ ಈ ರೀತಿ ಹೇಳಿ ಕಳುಹಿಸಿದನು:

"ನೀವು ಸಂದೇಹಪಡಬೇಡಿ. ಶತ್ರುಗಳನ್ನು ಹೊಡೆದು ಕೊಲ್ಲುವೆನೆಂಬ ಪಂಥವನ್ನು ಬಿಡೆನು. ದುರ್ಗಕ್ಕೂ ನನಗೂ ಮದುವೆಯಾಗಿದೆ. ಸ್ವರ್ಗ, ಮೃತ್ಯು ಪಾತಾಳಗಳಲ್ಲಿ ನನ್ನ ಕೀರ್ತಿಯು ಹಬ್ಬುವಂತೆ ಮಾಡುವೆನು. ದೂರ ದೇಶದ ಬಾದೂರಖಾನನು ತನ್ನ ದೇಶವನ್ನು ಬಿಟ್ಟು ನನ್ನ ದೇಶಕ್ಕೆ ಜೀವ ದಾಸೆಯಿಂದ ಬಂದು ನಮ್ಮನ್ನು ಮೊರೆ ಹೊಕ್ಕನು. ಅಂದೇ ನನ್ನ ತಲೆಯು ಸುಲ್ತಾನನಿಗೆ ಮೀಸಲಾಯಿತು. ಮೊರೆ ಬಂದ ಬಾದೂರನನ್ನು ಎಂದಿಗೂ ಬಿಡುವುದಿಲ್ಲವೆಂಬ ಭಾಷೆಯನ್ನು ಕೊಟ್ಟುದು ತಪ್ಪುವುದಿಲ್ಲ. ತುರುಕರ ದಂಡನ್ನು ತುಂಡುತುಂಡಾಗಿ ಕಡಿಯುವೆನು. ಜಟ್ಟಂಗಿ ರಾಮೇಶನ ವರ ಕುಮಾರನು ನಾನು. ಅವನ ದಯವು ನನಗಿರುವುದು. ಆದ್ದರಿಂದ ಈ ಕಾಳಗವು ಪೂರೈಸುವ ವರೆಗೂ ತಾವು ಸುರಕ್ಷಿತವಾಗಿ ಹೊಸದುರ್ಗದ ಕೋಟೆ ಯಲ್ಲಿರಬೇಕು."

ಮಂತ್ರಿ ಬೈಚಪ್ಪನನ್ನು ಕಂಡು ರಾಮನು ಅವನೊಡನೆ ಸಮಾಲೋಚನೆ ಮಾಡಿದನು. ತುರುಕರು ಬಾದೂರಖಾನನನ್ನು ಹಿಡಿಯಲು ಬಂದಿದ್ದಾರೆ. ಆದ್ದರಿಂದ ಅವನಿಗೆ ಹೆಂಡಿರು ಮಕ್ಕಳನ್ನು ಕರೆದುಕೊಂಡು ಭಂಡಾರ ಸಮೇತ ಹೊಸಮಲೆಗೆ ಹೋಗಿರಬೇಕೆಂದು ತಿಳಿಸಿ ಐನೂರು ಕುದುರೆ ಸಹಿತವಾಗಿ ಮಂತ್ರಿ ಬೈಚಪ್ಪನನ್ನು ಕಳುಹಿಸಿದನು. ಇತ್ತಲಾಗಿ ರಾಮನು ಕುಮ್ಮಟ ದುರ್ಗವನ್ನು ಬಿಟ್ಟು ಹೊರಟನು.

ತುರುಕರ ದಂಡು ಮುಂದೆ ನುಗ್ಗಿ ಬರುತ್ತಿರಲು ರಾಮನು ಶತ್ರುಗಳ ದಂಡನ್ನು ಕಣಿವೆಗಳಲ್ಲಿಯೇ ಮುತ್ತಿ ಕಡಿದು, ರಣಭೀತಿ ಹೆಣಭೀತಿ ಮಾಡಿದನು. ಭೂತ ಪ್ರೇತಗಳಿಗೂ ಮರುಳು ತಂಡಕ್ಕೂ ದಣಿಯುವಂತೆ ಉಣಿಸಿದನು. ಅನಂತರ ಕುಮ್ಮಟದುರ್ಗಕ್ಕೆ ಹಿಂತಿರುಗಿದನು. ನಡೆದ ಸಂಗತಿಯನ್ನು ಓಲೆಯಲ್ಲಿ ಬರೆದು ಚರರ ಸಂಗಡ ತಂದೆಗೆ ಕಳುಹಿಸಿದನು. ಊಳಿಗದವರು ಓಡಿ ಬಂದು ಹರಿಯಾಲದೇವಿಗೆ ಈ ಸುದ್ದಿಯನ್ನು ತಿಳಿಸಿದರು. ಕಂಪಿಲ ಅರಸು ಭಂಡಾರದಿಂದ ಎರಡು ಖಂಡುಗ ಹೊನ್ನನ್ನು ತರಿಸಿ ರಾಮನಿಗೆ ಕಳುಹಿಸಿದನು. ಹಿಂತಿರುಗಿದ ರಾಮನು ಮಂದಿ, ಅರಸು ಮಕ್ಕಳು ಸಹಿತ ಆನೆ ಕುದುರೆಗಳನ್ನು ಏರಿ ಸಂಜೆಯ ಹೊತ್ತಿನಲ್ಲಿ ಊರನ್ನು ಹೊಕ್ಕು ಅರಮನೆಯನ್ನು ಸೇರಿದನು.

ಮಾತಂಗಿಯ ದಂಡು ಉಬ್ಬುಬ್ಬಿ ಕುಮ್ಮಟ ನಗರವನ್ನು ಮುತ್ತಲು

ಬರುತ್ತಿರುವಾಗ ಅದರ ಎದುರಿಗೆ ಹೋಗಿ ಯುದ್ಧ ಮಾಡಲು ರಾಮನ ಕಡೆಯವರು ಸಿದ್ಧರಾಗಿದ್ದರು. ಹೆಬ್ಬಾಗಿಲನ್ನು ತೆಗಿಸದಲೆ ಮಾತಂಗಿಯ ಮೇಲೇರಿ ಹೋಗುವುದಾಗಿ ರಾಮನ ದಂಡಿನವರು ಉಬ್ಬುಬ್ಬಿ ಭಾಷೆ ಕೊಟ್ಟರು. ಆ ಹೊತ್ತಿಗೆ ನಳಿನಸಖನು ಅಸ್ತಮಾನವಾಗಲು, ಹಚ್ಚಿದ ದೀಪ ಗಳ ಸಾಲಿನಿಂದ ಕುಮ್ಮಟದುರ್ಗಕ್ಕೆ ಕಳೆಯೇರಿತು. ಕೋಟೆಯ ಕಾವಲಿನ ವರೂ, ಬಿಲ್ಲಿನವರೂ, ಎಕ್ಕಟಿಗರೂ ಎಲ್ಲರೂ ಕೋಟೆಯ ಮೇಲೆ ನಿಂತು ಧೀವಟಿಗಳನ್ನು ಹಿಡಿದುಕೊಂಡು ನೋಡುತ್ತಿದ್ದರು.

ಬೆಳಗಾದ ಮೇಲೆ ರಾಮನು ಶ್ರೀಪತಿಯನ್ನು ಧ್ಯಾನಿಸುತ್ತಾ ಅರ ಮನೆಗೆ ಬಂದು ಮಾನ್ಯೆಯರೆಲ್ಲರನ್ನೂ ಕರೆಸಿ ಸುಖಭೋಜನವನ್ನು ಮಾಡಿಸಿ ಉಡುಗೊರೆ ಇತ್ತು ಮನ್ನಿಸಿದನು. ಅನೇಕ ಜನ ರಾವುತರಿಗೆ ರಾಮನು ವಸ್ತ್ರಾಭರಣಗಳನ್ನು ದಾನ ಮಾಡಿ, ಗಂಧ, ಕಸ್ತೂರಿ, ಕುಂಕುಮ, ಕದಂಬವನ್ನು ಎಲ್ಲರಿಗೂ ಹಂಚಿದನು. 'ಭೂಮಂಡಲದ ರಾಯರ ಗಂಡ' ನೆಂಬ ಬಿರುದನ್ನು ಕಾಲೊಳಗೆ ಧರಿಸಿದನು. ಮುತ್ತು, ಪಚ್ಚೆ, ಚಿನ್ನದ ಚಿತ್ರಗಳನ್ನು ಧರಿಸಿದನು. ವಜ್ರಾಂಗಿಯನ್ನು ತೊಡಿಸಿದರು, ಕುದುರೆಗೂ ಅಲಂಕರಿಸಿದ್ದರು. ರಾಮನ ಎಡಬಲದಲ್ಲಿ ಭಟರು ನಿಂತು ಬಿರುದುಗಳನ್ನು ಉಗ್ಗಡಿಸುತ್ತಿದ್ದರು. ರಾಮನು ಬಂದು ಹೆಬ್ಬಾಗಿಲನ್ನು ತೆಗೆಯಿಸಿದನು. ರಾವುತರು ರಾಮನನ್ನು ಉಪಚರಿಸುತ್ತ ಬರುತ್ತಿದ್ದರು. ಛತ್ರದ ಮಕರ ರೆಕ್ಕೆಯನ್ನು ಎತ್ತಿಹಿಡಿದಿದ್ದರು. ಬಿರುದಿನ ಡೊಳ್ಳುಗಳನ್ನು ಬಾರಿಸುತ್ತಿದ್ದರು. ರಾಮನನ್ನು ಕಂಡು ಮಾತಂಗಿಯು ಅವನನ್ನು ಕೊಂಡಾಡಿದಳು. ರಾಮನು ದುರ್ಗವನ್ನು ಇಳಿದು ಹೆಬ್ಬಾಗಿಲನ್ನು ತೆಗೆಯಿಸಿದನು.

ಕೂಡಲೆ ಕೈ-ಕಾಳಗವು ಕೂಡಿತು. ಒಬ್ಬರನ್ನೊಬ್ಬರು ಮೂದಲಿ ಸುತ್ತಿರಲು, ರಾಮನು ಶತೃಗಳನ್ನು ತಿವಿಯುತ್ತಿದ್ದನು. ಮುಂದಕ್ಕೆ ಹೋದ ತನ್ನ ಕಡೆಯವರು ಹಿಂದಿರುಗದಿರುವುದನ್ನು ಕಂಡು ಮಾತಂಗಿಯು ಬೆರಗಾಗಿ ಕುದುರೆಯನ್ನೇರಿ ಮುಂದಕ್ಕೆ ನಡೆದಳು. ರಾಮನು ಮಾತಂಗಿಯು ಬರುತ್ತಿರುವುದನ್ನು ಕಂಡು, ತನ್ನ ಕಡೆಯವರಿಗೆ ಕೈಬೀಸಿ ಎಚ್ಚರಿಸಿದನು. ಕೂಡಲೆ ಬೇಡರು ಮುಂದಕ್ಕೆ ನುಗ್ಗಿ ತುರುಕರ ಡೇರೆ ಗಳನ್ನು ಹೊಕ್ಕು ವೀರರನ್ನು ಎಣಿಕೆಯಿಲ್ಲದೆ ಕಡಿಯುತ್ತ, ಕುದುರೆಗಳನ್ನು ಸೆರೆಹಿಡಿದು ತಂದು ರಾಮನಿಗೆ ಒಪ್ಪಿಸುತ್ತಿದ್ದರು. ರಣರಂಗವು ಎಲ್ಲೆಲ್ಲಿಯೂ ಹೆಣಮಯವಾಯಿತು.

ರಾಮನ ಕಡೆಯವರು ಕಣಿವೆಗಳಲ್ಲಿ ಕಾದಿದ್ದು ಒಳಕ್ಕೆ ಬರುವ ತುರುಕರ ಮೇಲೆ ಬಿದ್ದು ಕಗ್ಗೊಲೆಯನ್ನು ಮಾಡುತ್ತಿರಲು, ಅವರು ಕಂಗೆಟ್ಟು, ರಾಮನನ್ನು ಕೆಣಕಿ ಕೆಟ್ಟೆವು ಎಂದು ಹೇಳುತ್ತ ಮಾತಂಗಿಯ ದಂಡು ದಿಕ್ಕಾಪಾಲಾಗಿ ಓಡಿತು. ಆದರೆ ಮಾತಂಗಿಯ ಪ್ರೋತ್ಸಾಹದಿಂದ ಕೆಲವು ತುರುಕರು, ಕುದುರೆಗಳು ಹಿಂದಕ್ಕೆ ಓಡದಂತೆ ನಾಲ್ಕು ಕಾಲುಗಳನ್ನು ಕಟ್ಟಿ ನಿಂತು ಯುದ್ಧ ಮಾಡಲುಪಕ್ರಮಿಸಲು, ಮಾತಂಗಿಯ ಚಾತುರ್ಯವನ್ನು ಕಂಡು ರಾಮನು ಕುದುರೆಯನ್ನೇರಿ, ಮದಕರಿಯು ಕದಳಿವನವನ್ನು ಹೊಕ್ಕಂತೆ ಶತೃಗಳನ್ನು ಪಟ್ಟಾಕತ್ತಿಯಿಂದ ಕಡಿಯುತ್ತಿದ್ದನು. ಇವನ ಹೊಡೆತದಿಂದ ಅರಿಬಲದ ರಾವುತರ ತೋಳು ಖಂಡಿಸಿತು; ಗುಂಡಿಗೆಯೊಡೆದು ತುಂಡು ತುಂಡಾಗಿ ಬೀಳುತ್ತಿದ್ದರು. ತುರುಕರ ರಾವುತರು ಮಡಿಯುತ್ತಿದ್ದುದನ್ನು ಬಣ್ಣಿಸಲಸದಳವಾಯಿತು.

ಭೂತಪ್ರೇತ್ರಗಳು ಮೂರು ತಂಡವಾಗಿ ಒಂದು ತಂಡವು ರಾಮನನ್ನು ಕೊಂಡಾಡುತ್ತ ಇವನನ್ನು ಹಿಂಬಾಲಿಸಿತು. ಮಿಕ್ಕವುಗಳನ್ನೆಲ್ಲ ದಿಕ್ಕುದಿಕ್ಕಿನಲ್ಲಿ ದಣಿಸಿದನು. ಕುಮ್ಮಟದ ಆಳುವೇರಿಯ ಸುತ್ತಲೂ ರಣಮಾಯವಾಯಿತು.

ಕಾಟಣ್ಣನು ಕಮ್ಮಟದ ಕೋಟೆಗೆ ತುರುಕರ ಬಲಿಯನ್ನು ಕೊಡುತ್ತ ಕಾಳಗದಲ್ಲಿ ಜಯವನ್ನು ಹೊಂದಿ ರಾಮನಿಗೆ ತಿಳಿಸಿದನು. ರಾಮನ ಕಡೆಯವರು ಕೊಪ್ಪರಿಗೆಯಲ್ಲಿ ಕಾದ ಎಣ್ಣೆಯನ್ನೂ, ಕಾರಬೊಗ್ಗನ್ನೂ ತಂದು ಕೋಟೆಯ ಮೇಲೆ ಏರಿಬರುವ ಖಾನರ ಮೇಲೆ ಚೆಲ್ಲಿದರು. ಅಯ್ಯೋ! ಅಯ್ಯೋ! ಎಂದೆನ್ನುತ್ತ ರಾಮನ ಸಂಗಡ ಕಾದುವುದು ಅಸದಳವೆನ್ನುತ್ತ ಮಾತಂಗಿಯು ಹಿಂದಿರುಗಿದಳು. ರಾಮನ ಸಂಗಡ ಗುಡ್ಡಗಾಡುಗಳಲ್ಲಿ ನಿಂತು ಕಾದಬಾರದು ಎಂದು ಖಾನವಜೀರನನ್ನು ಕರೆದುಕೊಂಡು ಹಿಂದಕ್ಕೆ ತಿರುಗಿದಳು. ರಾಮನ ಕೂಡ ಕಾದುವವರೇ ಇಲ್ಲದ ಹಾಗಾಯಿತು ಎಂದ ತಮ್ಮ ತಮ್ಮೊಳಗೆ ಚಿಂತಿಸುತ್ತ ಒಂದು ಗಾವುದ ದಾರಿಯನ್ನು ಸಾಗಿದರು.

## ೨೧

ರಾಮನು ಕಾಳಗದಲ್ಲಿ ಜಯವನ್ನು ಪಡೆದು ಮಾತಂಗಿಯನ್ನು ಹಿಂದಕ್ಕೋಡಿಸಿ, ತಾನು ಅರಮನೆಗೆ ಹಿಂದಿರುಗಿ ಹೋದ ಮೇಲೆ ರಾಮನ

ಕಡೆಯ ತೆಲುಗರು ಸೇರಿ ಒಂದು ಆಲೋಚನೆಯನ್ನು ಮಾಡಿದರು.

"ನವಲಕ್ಷ ತೆಲುಗುರ ಗಂಡನೆಂಬ ಬಿರುದಿನ ಕಡಗವನ್ನು ಕಾಲಲ್ಲಿ ಧರಿಸಬಹುದೇ? ಇದರಿಂದ ನಮ್ಮ ತೆಲುಗರಿಗೆ ಅವಮಾನವಾಗಲಿಲ್ಲವೆ?"

ಎಂದು ತಮ್ಮ ತಮ್ಮಲ್ಲೆ ಮಾತನಾಡಿಕೊಂಡು ರಾಮನನ್ನು ಹೇಗಾದರೂ ಮಾಡಿ ಸೋಲಿಸಬೇಕೆಂದು ಆಲೋಚಿಸಿ ಮಾತಂಗಿಯು ಹಿಂತಿರುಗಿ ಹೋಗ ಕೂಡದೆಂದೂ ಪುನಃ ಕುಮ್ಮಟದುರ್ಗಕ್ಕೆ ಬಂದು ಮುತ್ತಿಗೆ ಹಾಕಿದರೆ ತಾವು ಕೋಟೆಯ ಬಾಗಿಲನ್ನು ತೆಗೆದು ಕೋಟೆಯನ್ನು ಅವಳ ವಶಮಾಡುವುದಾಗಿಯೂ ವಿವರಿಸಿ ಓಲೆಯನ್ನು ಬರೆಸಿ ಮಾತಂಗಿಗೆ ಕಳುಹಿಸಿದರು. ಮಾತಂಗಿಯು ಓಲೆಯನ್ನು ಕಂಡು ಸಂತೋಷದಿಂದ ಮಂದಿ, ಕುದುರೆ ರಾವುತರನ್ನೆಲ್ಲ ಕೂಡಿಕೊಂಡು ಹಿಂದಕ್ಕೆ ಬಂದು ಬೇಡರನ್ನು ಕಡಿದೊಟ್ಟುತ್ತಿದ್ದಳು.

ಇದನ್ನು ತಿಳಿದು ಕಾಟಣ್ಣನು ಕೂಡಲೆ ರಾಮನ ಅರಮನೆಗೆ ಹೋಗಿ ಮಾತಂಗಿಯು ಹಿಂತಿರುಗಿ ಬಂದು ಮುತ್ತಿಗೆ ಹಾಕಿದ ಸಂಗತಿಯನ್ನು ತಿಳಿಸಿದನು.

"ಇಂದು ಕುಮ್ಮಟದುರ್ಗದಲ್ಲಿ ಕಾಲನ ಆಟವಾಗಿದೆ. ದುರ್ಗದಲ್ಲಿದ್ದ ಬಾಲಕರು ಮಕ್ಕಳೆನ್ನದೆ ಎಲ್ಲರನ್ನೂ ತುರುಕರು ಕಡಿದೊಟ್ಟುತ್ತಿದ್ದಾರೆ. ಕೆಳಗೋಟೆಯು ನಮ್ಮ ಕೈತಪ್ಪಿ ಶತೃಗಳ ವಶವಾಗಿದೆ. ನಮ್ಮ ತೆಲುಗು ಮಾನ್ಯೆಯರು ತುರುಕರಿಗೊಳಗಾದ ಸುದ್ದಿಯು ಬಂದಿದೆ." ಎಂದು ಕಾಟಣ್ಣನು ಹೇಳಿದ ಮಾತನ್ನು ಕೇಳಿ ರಾಮನು ಬಹು ದುಃಖಿತನಾಗಿ ತನ್ನೊಳಗೆ ತಾನೆ 'ಇದೇನಚ್ಚರಿ!' ಎಂದುಕೊಳ್ಳುತ್ತ ಯುದ್ಧಕ್ಕೆ ಕೂಡಲೆ ಹೋಗಿ, ತುರುಕರ ಸಂಗಡ ಕಾದಾಡುವುದಾಗಿಯೂ ದೈವಸಂಕಲ್ಪವಿದ್ದರೆ, ಮಡಿಯಲು ಸಿದ್ಧನಾಗಿರುವುದಾಗಿಯೂ ದೃಢಸಂಕಲ್ಪ ಮಾಡಿ, ಅರಮನೆಯ ಸ್ತ್ರೀ ಪರಿವಾರವನ್ನೆಲ್ಲ ಕರೆಯಿಸಿದನು. ಮುತ್ತಿನ ಗದ್ದುಗೆಯ ಮೇಲೆ ಕುಳಿತು ಹರುಷದಿಂದ,

"ನಾನು ಮಡಿದರೆ ನೀವು ನನ್ನೊಡನೆ ವೀರಸ್ವರ್ಗಕ್ಕೆ ಬನ್ನಿರಿ. ಕಿಚ್ಚನ್ನು ಕಂಡು ಬೆದರಬೇಡಿರಿ. ಮನೋನಿಶ್ಚಯವನ್ನು ಮಾಡಿಕೊಳ್ಳಿರಿ," ಎಂದು ಮೆಚ್ಚಿನ ಮಡದಿಯರಿಗೆ ಬುದ್ಧಿವಾದವನ್ನು ಹೇಳಿ ಅವರಿಂದ ತಾಂಬೂಲವನ್ನು ಹೊಂದಿ ರಣದ ಉಡುಪನ್ನು ಧರಿಸಿ ಕಾಳಗಕ್ಕೆ ತೆರಳಲನುವಾದನು. ಪಟ್ಟದರಾಣಿಯು ಚಿನ್ನದ ಬಟ್ಟಲಲ್ಲಿ ಅಮೃತವನ್ನು ತಂದಳು. ರಾಮನು

ಒಡಹುಟ್ಟಿದ ಕಾಟಣ್ಣನೊಡನೆ ಒಂದೇ ಬಟ್ಟಲಲ್ಲಿ ಊಟ ಮಾಡಿ ಪರಿವಾರಕ್ಕೆಲ್ಲ ಭೇದವಿಲ್ಲದೆ ಚಿನ್ನದ ತಟ್ಟೆಯಲ್ಲಿ ವೀಳಯವನ್ನು ಕೊಟ್ಟನು.

"ಇಂದಿಗೆ ನನ್ನ ಆಯುಷ್ಯವು ತುಂಬಿತು- ಜಟ್ಟಂಗಿ ಶಂಭುಲಿಂಗನ ಕೃಪೆಯು ತಪ್ಪಿತು." ಎಂದು ಹೇಳಿ ತನ್ನೊಡನೆ ವೀರಸ್ವರ್ಗವನ್ನೇರಲು ಸಿದ್ಧರಾದ ನಾಲ್ಕು ಸಾವಿರ ಚಿನ್ನದ ಕಟ್ಟಿನ ಬಿಲ್ಲಿನವರಿಗೆ ವೀಳಯವನ್ನು ಕೊಟ್ಟು ತಾನು ಧನುರ್ಧಾರಿಯಾಗಿ, ಚಿನ್ಮಯಮೂರ್ತಿ ಜಟ್ಟಂಗಿ ರಾಮೇಶನನ್ನು ಸ್ಮರಿಸುತ್ತ ರಾಮನು ಕಾಳಗಕ್ಕೆ ಅನುವಾಗಿ ಹೊರಟನು.

ರಾಮನು ಹೆಬ್ಬಾಲಿಗೆ ಬಂದು ನಿಂತನು. ಯಾರು ಯಾರು ಕಾಳಗದಲ್ಲಿ ಬಿದ್ದರು ಎಂದು ವಿಚಾರಿಸಿದನು.

"ನಲ್ಲ ನಾಗ, ಬಿಲ್ಲ ಪೆನ್ನ, ಮೀನಿಗ ಸಂಗ, ಜೆಲ್ಲಿಬಿಲ್ಲಿನ ಬುಕ್ಕನಾಯಕ, ಕಲ್ಲಿಕೋಟೆಯಚಿಕ್ಕ ಮೊದಲಾದವರು ಬಿದ್ದರು. ಮಾದಿಗರ ಹಂಪನು ರಣದಲ್ಲಿ ಹೊಕ್ಕು ವೈರಿಗಳನ್ನು ಮೂದಲಿಸುತ್ತ ಒಳಹೊಕ್ಕು ಬರುತ್ತಿದ್ದ ತುರುಕರೊಡನೆ ಹೊಯ್‌ದಾಡಿ ಮಡಿದುಬಿದ್ದನು. ಅಕ್ಕಸಾಲೆಯ ಚಿಕ್ಕ ಮೊದಲಾದ ಎಕ್ಕಟಿಗರು ಬಿದ್ದರು. ದಿಕ್ಕುದಿಕ್ಕಿಗೆ ಬಲಿಗಳನ್ನಿಕ್ಕುತ್ತ ರಕ್ಕಸ ಮಾದನು ಬಿದ್ದನು. ಖಂಡೆಯಕಾರ ತುಳವರಮುದಿಯು ಬಿದ್ದನು. ಕೊಳ್ಳಿಯನಾಗ, ಬೇವಿನ ಸಿಂಗ, ಮೋಹದ ಭಂಟ, ಹೊಲೆಯರ ಹಳ್ಳುಗ ಮೊದಲಾದವರು ಬಿದ್ದರು," ಎಂದು ಊಳಿಗದವರು ವಿವರಿಸಿ ಹೇಳಿದ ಮಾತನ್ನು ಕೇಳುತ್ತ ಮನದಲ್ಲಿ ರೋಷವನ್ನು ತಾಳಿದನು. ತುರುಕರ ದಂಡನ್ನು ಕಾಳಗದಲ್ಲಿ ಹೋಳು ಹೋಳಾಗಿ ಕಡಿಯುವೆನು ಎಂದು ಕಿಡಿಕಿಡಿಯಾದನು.

ತನಗೆ ಬೇಕಾದ ವೀರರೊಂದಿಗೆ ಬೇರೆ ಕಡೆಗೆ ಹೋಗಿ ಕಾದಾಡಿರಿ ಎಂದು ಕಾಟಣ್ಣನಿಗೆ ಹೇಳಿದನು. ಕೊಂಬು, ಹೆಗ್ಗಾಳೆ, ಬೆಂಬಳಿ, ನಿಸ್ಸಾಳಗಳು ಕುಂಭಿನಿಯು ಬಿರಿಯುವಂತೆ ಧ್ವನಿ ಮಾಡುತ್ತಿರಲು, ರಾಮನು ಸಂಭ್ರಮದಿಂದ ದುರ್ಗವನ್ನಿಳಿದನು.

ಕಹಳೆಯ ಧ್ವನಿಯನ್ನು ಕೇಳಿ, ತುರುಕರ ಪಾಳೆಯದಲ್ಲಿ ಗದಗದಿಸಿದರು. ಅಗೋ! ರಾಮನು ದಾಳಿ ಬರುತ್ತಿರುವನು, ಎಂದು ಹೇಳಿ ತಮ್ಮೊಳಗೆ ಬೆದರಿದರು. ರಾಮನು ಕೈಯಲ್ಲಿ ಧನುವನ್ನು ಹಿಡಿದು ಝೇಂಕಾರ ಮಾಡುತ್ತ ಭರದಿಂದ ದುರ್ಗವನ್ನಿಳಿದನು. ಬೊಲ್ಲನನ್ನು ತಂದಿರಿಸಲು, ಮೆಲ್ಲನೆ ಕುದುರೆಯನ್ನು ಏರಿ ನಡೆದನು. ಆನೆಯನ್ನೇರಿ ಬರುತ್ತಿದ್ದ ಮಾತಂ

ಗಿಗೆ ರಾಮನನ್ನು ತೋರಿಸಿದರು. ಮಾತಂಗಿಯು ಚೆಲುವರ ಗಂಡ ರಾಮನನ್ನು ಕಣ್ಣು ತುಂಬ ನೋಡಿದಳು.

ರಾಮನು ಕಾದುತ್ತಲೆಆ ಮಾದಿಗಿತ್ತಿಯನ್ನು ತೋರಿಸೆಂದು ಪಕ್ಕದವರನ್ನು ಕೇಳಿದನು. ಮಾತಂಗಿಯು ಮೂದಲಿಸುತ್ತ ರಾಮನಿಗೆ, ಎದುರಾಗಿ ಬಂದಳು. ಆ ಹನ್ನೆ ಮಾತಂಗಿಯು 'ನಿನ್ನನ್ನು ನೀನೇ ಅರಿಯೆ' ಎಂದು ಹೇಳಿದಳು. ರಾಮನಿಗೆ ಸಮನಾದ ತುರುಕರ ವೀರರು ಅನೇಕ ಕುದುರೆ ಮತ್ತು ಆನೆಯ ರಾವುತರೂ ಒಮ್ಮೆಲೆ ರಾಮನ ಮೇಲೆ ಬಿದ್ದರು.

ರಾಮನು ಎದುರಾಗಿ ಬರುತ್ತಿದ್ಧ ಶತ್ರುಗಳ ಮೇಲೆ ನುಗ್ಗಿ, ಮಾತಂಗಿಯ ವೀರಜಡೆಯನ್ನು ಹಿಡಿದೆಳೆದು ಕತ್ತಿಯಿಂದ ಕಡಿಯಲು ಕೈ ಎತ್ತಿದನು, ಅಷ್ಟರಲ್ಲಿಯೇ ಕಾಳಗದಲ್ಲಿ ಕಾದಿ ಹೆಂಗಸರನ್ನು ಕೊಂದರೆ, ಸ್ವರ್ಗದಲ್ಲಿ ದುಸ್ಸಂಗ ತಪ್ಪದು ಎಂದು ಮನದಲ್ಲಿಯೇ ಯೋಚಿಸುತ್ತ ಕತ್ತಿಯನ್ನು ಒರೆಯಲ್ಲಿ ಹಾಕಿ, ಜಡೆಯನ್ನು ಬಿಟ್ಟು,

"ಜೀವವನ್ನು ಉಳಿಸಿಕೋ ಹೋಗು" ಎಂದು ಹೇಳಿ ಬೇರೆ ಕಡೆ ತನ್ನ ಗಮನವನ್ನು ಹರಿಸಿದನು.

ಆದರೆ ಕೃತಘ್ನೆಳಾದ ಮಾತಂಗಿಯು ಇದೇ ಸಮಯವನ್ನು ಸಾಧಿಸಿ ಬೇರೆ ಕಡೆ ಗಮನವನ್ನು ಹರಿಸಿದ್ದ ರಾಮನ ಮೇಲೆ ತಿರುಗಿ ಬಿದ್ದು ಗುರಿಯಿಟ್ಟು ಬಾಣಗಳನ್ನು ಬಿಡಲು ಅವು ರಾಮನ ಎದೆಗೆ ಬಡಿದು ಚುಚ್ಚಿಕೊಂಡವು.

ರಾಮನು ತನ್ನ ಎದೆಯ ಅಂಬನ್ನು ಕಿತ್ತನು. ರಕ್ತವು ಧಾರೆಯಾಗಿ ಹರಿದುದನ್ನು ನೋಡಿ ಸಂತೋಷಿಸಿದನು. ಮುಖವು ಬಾಡಿತು. ಈ ಘೋರ ದೃಶ್ಯವನ್ನು ನೋಡಿ "ಧರೆಯ ಗಂಡ'ನೆಂಬ ಬಿರುದು ಅಳಿಯಿತು. 'ಹಾ! ವಿಧಿಯೆ! ವೀರರಾಯನ ಗಂಡನೆಂಬ ಕೀರ್ತಿಯು ಇಂದಿಗೆ ಅಳಿಯಿತೇ" ಎಂದು ನುಡಿಯುತ್ತ, ರಾಮನ ಭಟರು ಬಾಣಗಳನ್ನು ಬಿಡುತ್ತಲೇ ಇದ್ದರು.

ರಾಮನ ಅವಸ್ಥೆಯನ್ನು ಕಂಡ ಎಕ್ಕಟಿಗರು ಅತುಳ ಶೌರ್ಯದಿಂದ ಶತ್ರುಗಳ ಮೇಲೆ ಬಾಣದ ಮಳೆಗರೆದರು. ಶತ್ರುಗಳನ್ನು ಕೆಣಕಿ ರೋಷದಿಂದ ರಣರಂಗವನ್ನು ಹೆಣಮಯ ಮಾಡಿದರು. ಬಾಣದ ಬಸವಯ್ಯನು ರಣರಂಗವನ್ನು ಹೊಕ್ಕು, ಹೆಬ್ಬುಲಿಯು ಪಶುವಿನ ಹಿಂಡಿನೊಳಕ್ಕೆ ಹೊಕ್ಕು ಪಶುಗಳನ್ನು ಕೊಲ್ಲುವಂತೆ, ಖಾನಖಾನರನ್ನು ಪಣಿಸುದೆ ಹಣಿದನು. ಶತ್ರುಗಳು ಇವನ ಮೇಲೆ ಬಿದ್ದು ಬಾಣಗಳಿಂದ ಹೊಡೆಯಲು

ಬಸವಯ್ಯನು ಬಿದ್ದನು. ಈ ರೀತಿ ಹೊಯ್ದಾಡಿದ ಕಾಳಗದಲ್ಲಿ ಹೆಣದ ರಾಶಿಗಳು ರಣರಂಗದಲ್ಲಿ ತುಂಬಿಹೋದವು. ಹುಲಿಮುಖದ ಬಾಗಿಲಿನಲ್ಲಿ ರಾಮನ ಭಟರು ತುರುಕರ ದಂಡನ್ನು ಕಡಿದು ಹಾಕಿದರು. ರಾಮನು ಇಕ್ಕೆಲದಲ್ಲಿಯೂ ಮುಸುಕಿದ್ದ ತುರುಕರ ತಲೆಗಳನ್ನೆಲ್ಲ ಚೆಂಡಾಡಿದನು.

ರಾಮನು ಆ ಸ್ಥಳವು ಸರಿಯಾಗಿಲ್ಲವೆಂದು ತಿಳಿದು ಬಾಗಿಲನ್ನು ಮುಚ್ಚಿ ಗೂಗೆ ಕಲ್ಲಿನ ಮೇಲೆ ಬಂದು ನಿಂತನು. ಇವನ ಮಂದಿಯು ಹಿಂಬಾಲಿಸಿತು. ರಾಮನು ನಿಶ್ಶಕ್ತನಾಗಿರುವುದನ್ನು ಇನ್ನೊಂದು ಕಡೆಯಲ್ಲಿ ಕಾದುತ್ತಿದ್ದ ಕಾಟಣ್ಣನು ಕಂಡು ರಾಮನೆಡೆಗೆ ಬಂದನು. ಕೂಡಲೆ ಕಾಟಣ್ಣನು,

"ಪರಬಲಾಂತಕ ವೈರಿಯ ಗಂಡನೆಂಬ ಬಿರುದು ಸಲ್ಲುವುದೋ ರಾಮ ನಿನಗೆ" ಎಂದನು.

ನಿಜಗಲ್ಲು ಚೆನ್ನಿಗ ರಾಮನು "ನನ್ನ ಜೀವನವು ಮುಗಿಯಿತು, ನೀನು ಊರಿಗೆ ಹೋಗಿ ಇಲ್ಲಿನ ವಿಷಯಗಳನ್ನೆಲ್ಲ ಹರಿಯಮ್ಮನಿಗೆ ತಿಳಿಸು," ಎಂದು ಕಾಟಣ್ಣನ ಅಡಿಗೆರಗಿದನು.

"ಶತ್ರುಗಳು ಹೊಡೆದ ಗಾಯದ ನೋವಿನಿಂದ ನಾನು ನಿಶ್ಶಕ್ತನಾಗುತ್ತಿದ್ದೇನೆಂದು ತಾಯಿ ಹರಿಯಮ್ಮನಿಗೆ ತಿಳಿಸು" ಎಂದು ಪುನಃ ರಾಮನು ಬೇಡಿದನು; ಕಣ್ಣುಹೋದ ಸಿಂಹದಂತೆಯೂ, ಒಡಲೊಳಗೆ ಸಾಸುವೆಯನ್ನು ಹಾಕಿದಂತೆಯೂ ಆಗಿದ್ದೇನೆ, ಇಂದು ನನ್ನ ಪುಣ್ಯವು ಕೊನೆಯಾಯಿತು. ಎಂದು ಅಣ್ಣನಿಗೆ ತಿಳಿಸಿದನು.

"ಜೀವಗಳ್ಳರ ಗಂಡನಾದ ರಾಮನೇ! ನಮಗೆ ಜಟ್ಟಂಗಿ ರಾಮೇಶನ ಕೃಪೆ ತಪ್ಪಿತು. ನಾನು ಹಿಂತಿರುಗದೇ ನಿನ್ನೊಡನೆ ಸಾಯುವೆನು. ಧರಣಿಯಲ್ಲ ಪ್ರಚಂಡನಾದ ಚಲುವೆಯರ ಗಂಡ ರಾಮನೇ! ನಿನ್ನನ್ನು ಗಾಯಗೊಳಿಸಿದ ವಜೀರರನ್ನು ತೋರಿಸು. ಅವರನ್ನು ಬೇರುಮಟ್ಟ ಕಿತ್ತು ತರುವೆನು" ಎಂದು ಕಾಟಣ್ಣನು ಹೇಳಲು ರಾಮನು,

"ತನ್ನ ಕೈಗೆ ಸಿಕ್ಕಿದ ಮಾತಂಗಿಯನ್ನು ಹೆಂಗಸೆಂದು ಕೊಲ್ಲದೆ ಬಿಡಲು ಕೃತಘ್ನಳಾದ ಮಾತಂಗಿಯು ತಿರುಗಿ ನನ್ನ ಮೇಲೆ ಬಿಟ್ಟ ಬಾಣವು ನನ್ನ ಎದೆಯನ್ನು ತಾಕಿತು. ಕಂಗೆಡದೆ ಹಿಂದಕ್ಕೆ ಹೋಗು" ಎಂದು ಮತ್ತೆ ಬೇಡಿದನು.

"ನನ್ನ ಸಂತೋಷಕ್ಕೆ ಕಿಚ್ಚನ್ನು ಇಟ್ಟೆಯಲ್ಲೋ ರಾಮ! ನಿನ್ನಂಥ ಸೋದರನನ್ನು ಎಂದು ಕಾಣುವೆನು! ಇರುವೆ ಗೂಡಿಗೆ ಬೆಂಕಿ ಇಟ್ಟಂತೆ ಆಯಿತು. ಹರಿಯಮ್ಮನಿಗೆ ಈ ಸುದ್ದಿಯನ್ನು ಏನೆಂದು ತಿಳಿಸಲಿ" ಎಂದು ನಿಟ್ಟುಸಿರು ಬಿಟ್ಟನು.

"ಅಣ್ಣಯ್ಯ ಕಂಗೆಡದಿರು; ಸಂಗ್ರಾಮದಲ್ಲಿ ಕಾದು ಕೀರ್ತಿಯನ್ನು ತಂದು ರಣದಲ್ಲಿ ಬಿದ್ದೆನೆಂದು ಅಂಗನೆಯರಿಗೆ ತಿಳಿಸು, ಅಭಿಮಾನವನ್ನು ತೊಡೆದು ರಾಣಿಯ ವಾಸವನ್ನೆಲ್ಲ ಕೊಲ್ಲು" ಎಂದು ಬೇಡಿದನು.

"ನಾನು ತಂದೆಯ ವಂಶಕ್ಕೆ ಕುಂದನ್ನು ತರದಂತೆ ಕಾದಿದೆನು. ಅಂದೆ ಚಿಕ್ಕಮ್ಮನು ನನ್ನನ್ನು ಕೊಂದಿದ್ದಳು. ಇಂದಿನ ವರೆಗೆ ತಂದೆಯ ವಂಶಕ್ಕೆ ಕುಂದು ತರದೆ ಕಾದಾಡಿದೆನು. ಜಟ್ಟಂಗೀಶನ ದಯೆ ಕುಂದಲು ಇಂದು ಕುಂದಿರುವೆನು, ನನ್ನನ್ನು ಹೆತ್ತ ತಾಯಿ ಹರಿಯಮ್ಮನಿಗೆ ಈ ಕಥೆಯನ್ನು ಹೇಳಬೇಡ. ಇನ್ನೂ ಗಾಯದಿಂದ ನರಳುತ್ತ ಕಾದಾಡುತ್ತಲಿರುವೆನೆಂದು ತಿಳಿಸು" ಎಂದು ಪರಿಪರಿಯಾಗಿ ಬೇಡಿದನು.

"ಜಟ್ಟಂಗಿ ರಾಮೇಶನ ಕೃಪೆಯು ನನಗೆ ತಪ್ಪಿತು. ನಾನು ಅರಮನೆಗೆ ಹೋಗಿ ಸುದ್ದಿಯನ್ನು ತಿಳಿಸಿ ಒಂದು ಗಳಿಗೆಯಲ್ಲಿ ಬರುವೆನು; ನಾನು ಬರುವವರೆಗೂ ನೀನು ಪ್ರಾಣವನ್ನು ಹಿಡಿದಿರು," ಎಂದು ಕಣ್ಣೀರು ಬಿಡುತ್ತ, ತಮ್ಮನಿಗೆ ತಿಳಿಸಿ ಅಲ್ಲಿ ನಿಲ್ಲದೆ ಉರಿಗೊಂಡ ಕರ್ಪೂರದಂತೆ ತರಹರಿಸುತ್ತ, ಕಾಟಣ್ಣನು ಅರಮನೆಗೆ ಓಡಿಬಂದನು.

ಕಾಟಣ್ಣನು ದುಃಖದಿಂದ ಹೇಳಿದ ಮಾತನ್ನು ಕೇಳಿ ಕಂಪಿಲನು ಮೂರ್ಛೆ ಹೋದನು. ಈ ಸುದ್ದಿಯನ್ನು ಕೇಳಿದ ಕೂಡಲೇ ಹರಿಯಮ್ಮನೂ ಕಡುಗಲಿ ರಾಮನ ಒಡಹುಟ್ಟಿದವರೂ ಎಲ್ಲರೂ ಹುಡಿಯಲ್ಲಿ ಬಿದ್ದು ಗೋಳಾಡಿದರು. ಕಾಟಣ್ಣನು ಅಲ್ಲಿ ನಿಲ್ಲದೆ ಕುಮ್ಮಟದುರ್ಗಕ್ಕೆ ಓಡಿಬಂದು ರಾಮನ ಮಡದಿಯರನ್ನೆಲ್ಲ ಶೃಂಗಾರಮಾಡಿಸಿದನು. ಅನಂತರ ಆ ಮಡದಿಯರು ಚೆಂದದಿಂದ ರಾಮನ ಕೀರ್ತಿಯನ್ನು ಹಾಡುತ್ತ ರಾಜಬೀದಿಯಲ್ಲಿ ಬಂದರು.

"ಚೆಲ್ವಚೆನ್ನಿಗ ರಾಮ, ಕಂದರ್ಪರೂಢ, ವೀರಾಧಿವೀರ, ರಣಶೂರ," ಎಂದು ಮೊದಲಾಗಿ ನಾರಿಯರೆಲ್ಲರೂ ರಾಮನನ್ನು ಕೊಂಡಾಡುತ್ತ, ಮಳಲ ಗೌರಿಯನ್ನು ಪೂಜೆಮಾಡಿ,

"ಏಳೇಳು ಜನ್ಮಗಳಿಗೂ ದೊರೆ ರಾಮನೇ ತಮ್ಮ ಪತಿಯಾಗಿ ದೊರ

ಕಲಿ, ಅರಸು ಕಂಪಿಲರಾಯ ಮಾವನಾಗಲಿ, ಹರಿಯಮ್ಮ ಅತ್ತೆಯಾಗಲಿ" ಎಂದು ಹೇಳುತ್ತ ಓಡಿಬಂದು ಕೊಂಡವನ್ನು ಹತ್ತಿ ರಾಮನ ಕೀರ್ತಿಯನ್ನು ಹಾಡುತ್ತ, ನಸುನಗೆ ನಗುತ್ತ ಕೆಂಡದಲ್ಲಿ ಧುಮುಕಿದರು.

ಕಾಟಣ್ಣನು ಸುದತಿಯರನ್ನೆಲ್ಲ ಕಿಚ್ಚಿನೊಳಗೆ ನೂಕಿದನು. ಅವರನ್ನೆಲ್ಲ ಕಿಚ್ಚು ಸುಡುತ್ತಿರಲು, ಜನಗಳ ಬೊಬ್ಬೆಯು ಹೆಚ್ಚಿ ಕುಮ್ಮಟವೇ ಬೆಚ್ಚಿತು.

ಕಾಟಣ್ಣನು ಅಲ್ಲಿ ನಿಲ್ಲದೆ ತನ್ನರಮನೆಗೆ ಬಂದು ರಾಮನ ಮಡದಿಯರನ್ನೆಲ್ಲಕಿಚ್ಚಿನಲ್ಲಿ ಹಾಕಿದ ಸಂಗತಿಯನ್ನು ತನ್ನ ಮಡದಿಗೆ ಹೇಳಲು, ಕಡುಗಲಿ ಕಾಟಣ್ಣನರಸಿಯು,

"ನನ್ನ ಆಸೆಯನ್ನು ಬಿಟ್ಟು ತಡಮಾಡದೆ ನನ್ನನ್ನು ಕಡಿ" ಎಂದು ತನ್ನರಸನನ್ನು ಪ್ರಾರ್ಥಿಸಿದಳು. "ನನಗೆ ಜೀವದಾಸೆಯಿಲ್ಲ" ಎಂದು ಹೇಳುತ್ತ ತನ್ನ ತಲೆಯನ್ನು ಕಾಟಣ್ಣನ ಮುಂದೆ ತಗ್ಗಿಸಿದಳು. ಕೂಡಲೇ ಕಾಟಣ್ಣನು ಕತ್ತಿಯನ್ನು ಝಳಪಿಸುತ್ತ, ತನ್ನರಸಿಯ ಉದರದ ಮೇಲೆ ಇರಿಯಲು, ಸುರಿವ ರಕ್ತವನ್ನು ಕಂಡು ಬಾಯಿ ಬಾಯಿ ಬಿಟ್ಟನು.

ಈ ರೀತಿ ಹೆಮ್ಮಕ್ಕಳನ್ನು ಕೊಂದು, ಮನಸ್ಸನ್ನು ನಿರ್ಮಲ ಮಾಡಿಕೊಂಡು ತಮ್ಮ ರಾಮನು ಏನಾಗಿರುವನೋ ಎನ್ನುತ್ತ ರಣರಂಗಕ್ಕೆ ಓಡಿಬಂದನು.

ರಾಮನ ಎಕ್ಕಟಿಗರು ತಮ್ಮೊಡೆಯನ ಸುತ್ತುಗಟ್ಟಿ ನಿಂತು ಶತ್ರುಗಳೊಡನೆ ಹೋರಾಡಿದರು, ರಾಮನಿಗೆ ತನ್ನ ಪ್ರಾಣವನ್ನೇ ಮೀಸಲಾಗಿಟ್ಟಿದ್ದ ದೇವಿಶೆಟ್ಟಿ ಲಿಂಗನು ಪ್ರಾಣದಾಸೆಯನ್ನು ತೊರೆದು ಖಾನರನ್ನೂ ಮಲುಕರನ್ನೂ ಕೊಂದು ತಾನೂ ಕಾಳಗದಲ್ಲಿ ಮಡಿದುಬಿದ್ದನು. ತನ್ನ ಮೈಯೆಲ್ಲವು ಗಾಯವಾಗಿದ್ದರೂ ಶತ್ರುಗಳೊಡನೆ ಕಂಪಿಲನ ಕುಮಾರ ಲಿಂಗನು ಹೊಯ್ದಾಡಿ ರಾಮನಡಿಯಲ್ಲಿ ಬಿದ್ದು ಮಡಿದನು.

ಕಾಟಣ್ಣನು ರಣರಂಗಕ್ಕೆ ಬಂದು ಅಲ್ಲಿ ಮಡಿದು ಬಿದ್ದಿದ್ದ ವೀರರನ್ನೆಲ್ಲ ನೋಡಿದನು. ದೇವಿಶೆಟ್ಟಿಯ ಲಿಂಗ, ಒಡಹುಟ್ಟಿದ ಲಿಂಗ ಮುಂತಾದವರನ್ನು ನೋಡಿದನು. ಸಿಂಹದ ಮರಿಯಂತೆ ಕುಳಿತದ್ದ ರಾಮನನ್ನು ನೋಡಿ

"ಏಳು ವೀರರ ಗಂಡ, ಏಳು ಬಲ್ಲಾಳರ ಗಂಡ, ಏಳು ಸುರತಾಣನ ಗಂಡ, ಏಳು! ಏಳು! ನನ್ನ ಕಷ್ಟವನ್ನು ನೋಡು" ಎಂದು ರಾಮನನ್ನು ಮಾತನಾಡಿಸಿದನು.

ರಾಮನು ಬೊಲ್ಲನ ಮೇಲೆ ಏರಿ ಕೂತಿದ್ದನು; ಕೈಯಲ್ಲಿ ಭಲ್ಲೆಯನ್ನು ಹಿಡಿದಿದ್ದನು. ಮಾತಂಗಗಿಯ ಬಾಣದ ಏಟಿನ ಗಾಯದ ನೋವಿನಿಂದ ಕಣ್ಣು ಮುಚ್ಚಿದನು. ಕೂಡಲೇ ತುರುಕರು ಹೆದರಿ ಓಡಿದರು,

ಕಾಟಣ್ಣನು ಮಾದಗಿತ್ತಿಯನ್ನು ತೋರಿಸು ಎಂದು ಹೇಳುತ್ತ, ಮೂದಲಿಸುತ್ತ ಓಡುವವರನ್ನು ಹಿಂಬಾಲಿಸಿದನು. ಹತ್ತು ಸಾವಿರ ಸುಲ್ತಾನನ ದಂಡು ಒಡನೆಯೆ ಅಲ್ಲಿಗೆ ಬಂದು ಕಾಟಣ್ಣನನ್ನು ಮುತ್ತಿತು, ಮಾದಿಗಿತ್ತಿಯು ಸಿಕ್ಕಳೆಂದು ಕೂಗುತ್ತ ಅವಳ ಮೇಲೇರಿ ಹೋಗುತ್ತಿರಲು ಅವಳ ಸುತ್ತಲೂ ಇದ್ದ ಖಾನಖಾನರು ಕಾಟಣ್ಣನ ಮೇಲೆ ಬಿದ್ದರು. ಹದ್ದು ಹಕ್ಕಿಗಳನ್ನು ಕೊಯ್ಯುವಂತೆ. ತನ್ನ ಮೇಲೆ ಬಿದ್ದ ಖಾನರನ್ನು ಕಾಟಣ್ಣನು ತರಿಯುತ್ತ, ತಾನೂ ರಣದಲ್ಲಿ ಬಿದ್ದು ಮಡಿದನು. ತನ್ನ ಒಡಹುಟ್ಟಿದ ಅಣ್ಣನು ಮಡಿದದ್ದನ್ನು ನೋಡಿ ಚೆನ್ನಿಗರಾಮನು ಮುಚ್ಚಿದ ಕಣ್ಣನ್ನು ತಿರುಗಿ ತೆಗೆಯಲೇ ಇಲ್ಲ.

---

# ಹಿನ್ನುಡಿ

ವಿಜಯನಗರ ಸಾಮ್ರಾಜ್ಯ ಸ್ಥಾಪನೆಯ ಮುನ್ನ ಹಂಪೆ ಮತ್ತು ಆ ಸುತ್ತಮುತ್ತಲಿನ ರಾಜ್ಯವನ್ನು ಪುಪ್ಪಲವಂಶದ ಕಂಪಿಲದೇವರಾಯ ಮತ್ತು ಅವನ ಮಗ ಕುಮಾರ ರಾಮ ಎಂಬುವರು ರಾಜ್ಯಭಾರ ಮಾಡುತ್ತಿದ್ದರು. ಉತ್ತರ ಭಾರತದಿಂದ ದಕ್ಷಿಣಾಪಥಕ್ಕೆ ಕ್ರಿ.ಶ. ೧೨೯೪ ರಿಂದ ಸುಮಾರು ಅರ್ಧ ಶತಮಾನಕಾಲ ಧಾಳಿ ಬಂದ ಮುಸಲ್ಮಾನರ ಹಾವಳಿಯನ್ನು ತಡೆಗಟ್ಟಲು ಈ ಪುಪ್ಪಲವಂಶದರಸರು ಸತತ ಪ್ರಯತ್ನಮಾಡಿದರು.

ಅಂದು ದೇಶ ಮತ್ತು ಧರ್ಮರಕ್ಷಣೆಗಾಗಿ ತೋರಿಸಿದ ಈ ರಾಜರ ರಣ ಶೌರ್ಯ, ಮತ್ತು ಸಾಹಸ ಕಾರ್ಯಗಳನ್ನು ವರ್ಣಿಸಿ ಹಲವು ಕವಿಗಳು ಸಾಂಗತ್ಯ ರೂಪದಲ್ಲಿ ಗ್ರಂಥಗಳನ್ನು ರಚಿಸಿರುವರು. ರಾಮಾಯಣ, ಮಹಾಭಾರತ, ಜೈಮಿನಿ ಭಾರತಗಳಂತೆ ಈ ಸಾಂಗತ್ಯಗಳು ಕನ್ನಡಿಗರ ಮನೆಮನೆಯಲ್ಲಿ ಪಠಿಸಲ್ಪಡುತ್ತಿದ್ದವು. ಆದರೆ ಆಂಗ್ಲ ಭಾಷಾ ಪ್ರಾಬಲ್ಯದಿಂದ ಎಲ್ಲಾ ಕನ್ನಡ ಗ್ರಂಥಗಳಂತೆ ಈ ಸಾಂಗತ್ಯಗಳೂ ಮೂಲೆಗೊರಗಿದವು. ಈಗ ಕೈಬರಹದ ಪ್ರತಿಗಳು ದೊರೆಯುವುದೂ ದುರ್ಲಭವಾಗಿದೆ. ಈ ಸಾಂಗತ್ಯಗಳೆಲ್ಲಾ ಮನೋರಂಜನೆಯ ಕಾಲ್ಪನಿಕ ಅಥವ ಸುಳ್ಳು ಕಥೆಗಳೆಂದು ಭಾವಿಸಲ್ಪಟ್ಟಿದ್ದುವು. ಆದರೂ ಇವುಗಳಲ್ಲಿ ಕನ್ನಡನಾಡಿನ ಇತಿಹಾಸ ಅಡಗಿದೆ ಎಂಬ ವಿಷಯವನ್ನು ಹೊರಗೆಡವಿದ ಕೀರ್ತಿ ಶ್ರೀಯುತ ಮೈಸೂರು ಹಟ್ಟಿ ರಾಮಶರ್ಮರಿಗೆ ಸಲ್ಲತಕ್ಕದ್ದಾಗಿರುತ್ತೆ.

ಇದುವರೆಗೆ ಆರು ಕವಿಗಳ ಸಾಂಗತ್ಯಗಳು ಪ್ರಕಾಶಕ್ಕೆ ಬಂದಿವೆ. ಪಾಂಚಾಳಗಂಗನ ಕುಮಟೀ ರಾಮನ ಸಾಂಗತ್ಯದ ಕಥೆಯ ಸಾರಾಂಶವನ್ನು ಶ್ರೀ ರಾಮಶರ್ಮರು ೧೯೨೯ನೆಯ ಅಕ್ಟೋಬರು ತಿಂಗಳ ಮಿಥಿಕ್ ಸೊಸೈಟಿಯ ತ್ರೈಮಾಸಿಕ ಪತ್ರಿಕೆಯಲ್ಲಿ ಮೊದಲು ಪ್ರಕಟಿಸಿದರು. ಶ್ರೀಯುತ ರಾಮಶರ್ಮರು ಕುಮಾರ ರಾಮನ ರಾಜಧಾನಿಯಾಗಿದ್ದ ಕುಮ್ಮಟ ದುರ್ಗವನ್ನು ಸಂದರ್ಶಿಸಿ ಅದೇ ತ್ರೈಮಾಸಿಕ ಪತ್ರಿಕೆಯಲ್ಲಿ ಕೆಲವು ಲೇಖನಗಳನ್ನು ಪ್ರಕಟಿಸಿರುವರು. ನಂಜುಂಡ ಕವಿಯ 'ಪರದಾರ ಸೋದರ ರಾಮನ ಸಾಂಗತ್ಯ'ದ ಬಹುಭಾಗದ ಸಾರಾಂಶವು ಮೈಸೂರು ಶಾಸನ ಇಲಾಖೆಯ ೧೯೨೯ರ ವರದಿಯಲ್ಲಿ ಪ್ರಕಟವಾಗಿದೆ. ನಾಗಸಂಗಯ್ಯನ 'ಪರನಾರಿಯರಿಗೆ

ತಿಂಗಳ 'ಸುಬೋಧ'ದಲ್ಲಿಯೂ ಮತ್ತು ೧೯೪೧ನೇ ಜುಲೈ ತಿಂಗಳ ಮಿಥಿಕ್ ಸಂಘದ ತ್ರೈಮಾಸಿಕದಲ್ಲಿಯೂ ನನ್ನಿಂದ ಪ್ರಕಟವಾಗಿದೆ. ಮಹಲಿಂಗ ಸ್ವಾಮಿಯ 'ಬಾಲ ಕುಮಾರರಾಮನ ಸಾಂಗತ್ಯ'ವನ್ನು ೧೯೪೪ನೆಯ ಶರಣ ಸಾಹಿತ್ಯದಲ್ಲಿಯೂ, ಕಂನಡ ಕವಿಜಾಣ ಗಂಗೈಯ್ಯನ 'ಚನ್ನರಾಮ'ನ ಕೃತಿಯ ಸಾರಾಂಶವನ್ನು ವಾಗ್ಭೂಷಣದಲ್ಲಿಯೂ ಪ್ರಕಟಿಸಿರುವೆನು. ಇನ್ನೊಬ್ಬ ಗಂಗ ನೆಂಬ ಕವಿಯ 'ಕುಮಾರ ರಾಮನ ಚರಿತ್ರೆ'ಯ ಸಾರಾಂಶವನ್ನು ಶ್ರೀಯುತ ಕೂಡ್ಲಿಗಿಯವರು ೧೯೪೨ನೆಯ ಜೂನ್ ತಿಂಗಳ ಜಯಕರ್ನಾಟಕದಲ್ಲಿ ಪ್ರಕಟಿ ಸಿರುವರು. ಈ ರೀತಿಯಾಗಿ (೧) ಪಾಂಚಾಳ ಗಂಗ, (೨) ನಂಜುಂಡ (೩) ನಾಗಸಂಗಯ್ಯ, (೪) ಮಹಲಿಂಗಸ್ವಾಮಿ, (೫) ಕಂನಡ ಕವಿಜಾಣ ಗಂಗೈಯ್ಯ, (೬) ಗಂಗ ಎಂಬುವರು ಸಾಂಗತ್ಯ ರೂಪದಲ್ಲಿ ಬೇರೆ ಬೇರೆ ಕೃತಿ ಗಳನ್ನು ಬರೆದಿರುವರು. ಇವುಗಳಲ್ಲದೆ ಅಜ್ಞಾತ ಕವಿಗಳ ಕೆಲವು ಸಾಂಗತ್ಯ ಗಳು ದೊರೆತಿವೆ. ಕೆಲವರು ಯಕ್ಷಗಾನದಲ್ಲಿ ಬಯಲಾಟಗಳನ್ನು ರಚಿಸಿರು ವರು. ಆದಿಕರ್ಣಾಟಕರು ಬಳ್ಳಾರಿ, ಚಿತ್ರದುರ್ಗ ಜಿಲ್ಲೆಗಳಲ್ಲಿ ಈ ಬಯ ಲಾಟವನ್ನು ಈಗ್ಲೂ ಆಡುತ್ತಿರುತ್ತಾರೆ. ಈಚೆಗೆ ಶ್ರೀಯುತ, ಡಾಕ್ಟರು ನೆಲಯೂರು ವೆಂಕಟರಮಣಯ್ಯನವರು 'ಕುಮಾರ ರಾಮುನಿ ಕಥ' ಎಂಬ ತೆಲುಗು ಗ್ರಂಥವನ್ನು ಮದ್ರಾಸು ಪ್ರಾಚ್ಯ ಕೈಬರಹದ ಪುಸ್ತಕ ಭಂಡಾರದ ಗ್ರಂಥಾವಳಿಯಲ್ಲಿ ಸಂಪಾದಿಸಿರುವರು. ತಮಿಳು ಭಾಷೆಯಲ್ಲಿಯೂ ಒಂದು ಗ್ರಂಥವಿರುವುದಂತೆ.

ಈ ಸಾಂಗತ್ಯಗಳು ನಡೆದ ಸಂಗತಿಗಳನ್ನು ನಡೆದಂತೆ ವಿವರಿಸಿರುವ ಇತಿಹಾಸ ಕಥಾ ಗ್ರಂಥಗಳು. ಇತಿಹಾಸದ ಸತ್ಯಾಂಶಗಳನ್ನೊಳಗೊಂಡು ಪಂಡಿತರಿಗೂ ಪಾಮರರಿಗೂ ಮನೋರಂಜಕವಾಗಿರುವಂತೆ ಕಥೆಯನ್ನು ನೆಯ್ದಿದೆ. ಅಂದಿನ ಕಾಲದ ಭಾರತದ ವೀರರ ಸಾಹಸವನ್ನೂ, ಸಂಸ್ಕೃತಿ ಯನ್ನೂ ಇದ್ದಂತೆ ವರ್ಣಿಸಲಾಗಿದೆ. ನಾಗಸಂಗಯ್ಯನ ಗ್ರಂಥವನ್ನು ಅನು ಸರಿಸಿ ಉತ್ತರಾರ್ಧ ಭಾಗವನ್ನು ಮಾತ್ರ 'ಗಂಡುಗಲಿ ಕುಮಾರ ರಾಮ' ಎಂಬ ಹೆಸರಿನಿಂದ ಮಿಂಚಿನ ಬಳ್ಳಿಯ ೪ನೆಯ ವರುಷದ ೪ನೆಯ ಕುಡಿಯಾಗಿ ಪ್ರಕಟಿಸಲಾಗಿತ್ತು. ಈಗ ಪೂರ್ಣ ಕಥೆಯು ಪ್ರಕಟವಾಗಿದೆ. ಕಥೆಯ ಮಾಧುರ್ಯವನ್ನು ಸವಿಯಲು ಐತಿಹಾಸಿಕ ಹಿನ್ನೆಲೆಯು ಅವಶ್ಯಕವಾದುದ ರಿಂದ ಆ ಕಾಲದ ಇತಿಹಾಸವನ್ನು ಸಂಕ್ಷೇಪವಾಗಿ ಕೊಟ್ಟಿರುತ್ತೇನೆ.

## ಸಂಕ್ಷಿಪ್ತ ಇತಿಹಾಸ

ದಕ್ಷಿಣಾಪಥದ ರಾಜ್ಯಗಳು: ಕ್ರಿ. ಶ. ೧೦ನೆಯ ಶತಮಾನದ ಅಂತ್ಯದಲ್ಲಿ ದಕ್ಷಿಣ ಭರತಖಂಡದಲ್ಲಿ ನಾಲ್ಕು ಚಕ್ರಾಧಿಪತ್ಯಗಳೂ, ಅನೇಕ ಸಾಮಂತ ರಾಜ್ಯಗಳೂ ಇದ್ದವು. ಕರ್ನಾಟಕವು ಇಬ್ಭಾಗವಾಗಿ ಉತ್ತರದಲ್ಲಿ ಸೇವುಣರೆಂಬ ಯಾದವರು ದೇವಗಿರಿಯ ರಾಜಧಾನಿಯಿಂದ ಆಳುತ್ತಿದ್ದರು. ದಕ್ಷಿಣದಲ್ಲಿ ತೆಂಕಣ ಚಕ್ರವರ್ತಿಗಳೆಂಬ ಹೆಸರಿನಿಂದ ಹೊಯ್ಸಳ ಯಾದವರು ದೋರಸಮುದ್ರಾಧೀಶರಾಗಿದ್ದರು. ಕಾಕತೀಯರು ಆಂಧ್ರ ಚಕ್ರೇಶ್ವರರಾಗಿ ಓರಗಲ್ಲು ರಾಜಧಾನಿಯಲ್ಲಿ ಅಧಿಪತಿಗಳಾಗಿದ್ದರು. ಕೇವಲ ದಕ್ಷಿಣದಲ್ಲಿ ಮಧುರೆಯ ಪಾಂಡ್ಯರು ಅತ್ಯಂತ ದರ್ಪದಿಂದ ಆಳುತ್ತಿದ್ದರು. ಇವುಗಳಲ್ಲಿ ಕರ್ನಾಟ ದೇಶವು ಸಿರಿಯಿಂದ, ಸಿಂಗರದಿಂದ, ಸೊಬಗಿನಿಂದ ಕೂಡಿ, ಗ್ರಾಮ, ನಗರ, ಮಂಡಳಿಗಳಿಂದ ಶೋಭಿಸುತ್ತಾ, ಕಾವೇರಿಯಿಂದ ಗೋದಾವರಿ ವರೆವಿಗೂ ಪ್ರಸರಿಸಿತ್ತು.

ಪುನ್ನಲ ಅರಸರು; ಕ್ರಿ. ಶ. ಸುಮಾರು ೧೨೬೦ನೆಯ ಸಂವತ್ಸರದಲ್ಲಿ ತುಮಕೂರು ಜಿಲ್ಲೆಯ ನಿಡುಗಲ್ಲು ಎಂಬ ಅಭೇದ್ಯವಾದ ಕೋಟೆಯು ಚೋಳ ವಂಶದ ಮಹಾರಾಜರಿಗೆ ರಾಜಧಾನಿಯಾಗಿತ್ತು. ಇವರ ಆಶ್ರಿತರಾಗಿ ತುಂಗ ಭದ್ರ ವೇದಾವತಿಗಳ ಮಧ್ಯದಲ್ಲಿ ಮುಮ್ಮಡಿಸಿಂಗನೆಂಬ ನಾಯಕನು ನೂರಾರು ಕಿರಾತರಿಗೆ ಅಧಿಪತಿಯಾಗಿ ಒಂದು ಸಣ್ಣ ರಾಜ್ಯಕ್ಕೆ ಒಡೆಯನಾಗಿದ್ದನು ಈ ರಾಜ್ಯವನ್ನು ಸ್ಥಾಪನೆಮಾಡಿದ ಮೂಲಪುರುಷ ವೀರ ಕಸ್ತೂರಿನಾಯಕ. ಅನಂತರ ಇಬ್ಬರು ಆಳಿದರು. ನಾಲ್ಕನೆಯವನೇ ಮುಮ್ಮಡಿಸಿಂಗ. ಇವ ನನ್ನು ಮುಮ್ಮಡಿ ಎಂದೂ ಸಂಬೋಧಿಸಿದೆ. ಈ ರಾಜರು ನಾಯಕ ಮತ ದವರು. ಇವರಿಗೆ ಬೇಡರು, ಕಿರಾತರು, ವ್ಯಾಧರು, ಪುಳಿಂದರು ಮತ್ತು ನಿಷಾದರು ಎಂಬ ನಾನಾ ಹೆಸರುಗಳಿವೆ. ವಾಲ್ಮೀಕಿ ಋಷಿಯ ವಂಶಸ್ಥರೆಂದು ಉಕ್ತವಾಗಿದೆ. ಕಾಮಗೇತಿ ಮತ್ತು ಕಣ್ಣಪ್ಪಯ್ಯ ಎಂಬುವರು ಈ ಕುಲದಲ್ಲಿ ಹೆಸರಾದವರು. ಇವರ ವಂಶ ಅಭಿವೃದ್ಧಿಯಾಗಿ ೨೮ ಬೆಡಗುಗಳಾದುವು. ಇವುಗಳಲ್ಲಿ "ಪುನ್ನಲ" ಎಂಬುದು ಒಂದು ಬೆಡಗು. ಈ ಬೆಡಗಿಗೆ ಸೇರಿದ ಮುಮ್ಮಡಿ ಸಿಂಗ ಮತ್ತು ಈ ವಂಶದ ಅರಸರಿಗೆ ಪುನ್ನಲ ಕುಲದ ಅರಸರು ಎಂಬ ಹೆಸರು ಬಂದಿದೆ. ಈಚೆಗೆ ಕನ್ನಡ ನಾಡಿನಲ್ಲಿ ಆಳಿದ ಹರಪನಹಳ್ಳಿ,

ತರೀಕೆರೆ, ಗುಡಿಕೋಟೆ ಮುಂತಾದ ಪಾಳೆಯಗಾರರು ಈ ಪುವ್ವಲಕುಲದವರು ಎಂದು ಆಯಾ ಪಾಳೆಯಗಾರರ ಇತಿಹಾಸದಿಂದ ತಿಳಿದುಬರುವುದು.

ತೋರಣದ ಮುಮ್ಮಡಿ ಸಿಂಗನು ತನ್ನ ರಾಜ್ಯಕ್ಕಾಗಿ ತನ್ನ ದಾಯಾದಿಗಳೊಡನೆ ಕಲಹವಾಡಲು, ಅವರು ಇವನನ್ನು ದೇಶವನ್ನೇ ಬಿಟ್ಟೋಡಿಸಿದರು. ಮುಮ್ಮಡಿ ಸಿಂಗನು ರಾಜ್ಯಭ್ರಷ್ಟನಾಗಿ ದೇವಗಿರಿ ಅಂದರೆ ಇಂದಿನ ದೌಲತ್ತಾಬಾದಿನಲ್ಲಿ ಆಳುತ್ತಿದ್ದ ಸೇವುಣ ಚಕ್ರೇಶ್ವರರ ಬಳಿ ಆಶ್ರಿತನಾಗಿ ಓಲೈಸುತ್ತಿದ್ದನು

ಸೇವುಣ ಚಕ್ರವರ್ತಿ ರಾಮಚಂದ್ರ ದೇವರಾಯನು ಬೇಟೆಯಾಡಲು ಹೋಗಿದ್ದಾಗ ಒಂದು ಹೆಬ್ಬುಲಿಯು ರಾಜನ ಮೇಲೆ ಬೀಳಲು, ಸಮೀಪವರ್ತಿಯಾಗಿದ್ದ ಮುಮ್ಮಡಿ ಸಿಂಗನು .ರಾಜನನ್ನು ಹುಲಿಯಿಂದ ಪಾರು ಮಾಡಿ ಪ್ರಾಣವನ್ನುಳಿಸಿದನು. ರಾಜನು ಕೃತಜ್ಞತೆಯಿಂದ ಔದಾರ್ಯವನ್ನು ತೋರಿಸಿ ಮುಮ್ಮಡಿಯನ್ನು ಮರ್ಯಾದಿಸಿದನು. ಮತ್ತೊಮ್ಮೆ ಮುಮ್ಮಡಿ ಸಿಂಗನು ಬೇಟೆಯಾಡುತ್ತಿದ್ದಾಗ, ಅಳಲೆಯೊಂದನ್ನು ಹಿಡಿಯಬೇಕೆಂದು ಬೆನ್ನು ಹತ್ತಿ ಹಿಂಬಾಲಿಸಲಾಗಿ, ಅದು ಒಂದು ಬಿಲವನ್ನು ಪ್ರವೇಶಿಸಿತು. ಮುಮ್ಮಡಿ ಸಿಂಗನು ಆ ಬಿಲವನ್ನು ಅಗಿಯಲಾರಂಭಿಸಿದನು. ಅಲ್ಲಿ ಗುಪ್ತವಾಗಿದ್ದ ಅಪಾರವಾದ ದ್ರವ್ಯರಾಶಿ ಆತನಿಗೆ ಲಭಿಸಿತು. ಆ ದ್ರವ್ಯದಿಂದ ನೂತನ ಮಂದಿರಗಳನ್ನು ನಿರ್ಮಿಸಿ ಸುಖದಿಂದಿರುತ್ತಿದ್ದನು.

ಮುಮ್ಮಡಿ ಸಿಂಗನು ಅನಂತರ ತನ್ನ ಒಡೆಯನಾದ ರಾಮದೇವರಾಯನ ಆ ಸ್ಥಾನದಿಂದ ದಕ್ಷಿಣ ದಿಕ್ಕಿಗೆ ಕಂಪಳ ಸಮೇತ ವಲಸೆ ಹೊರಟು ಪ್ರಯಾಣ ಮಾಡುತ್ತಾ ಮಲೆಯ ಸಂಗ್ರಿ ದೇಶವನ್ನು ಹೊಕ್ಕು ಹನೆಯ ಗುಡ್ಡ ಬಳಿ ಪಾಳೆಯವನ್ನು ಬಿಟ್ಟನು. ಅವನೂ ಪರಿವಾರದವರೂ ಅಲ್ಲಿಯೇ ನೆಲೆಸಿದರು. ಆಗ್ಗೆ ಆ ದೇಶಕ್ಕೆ ಅಧಿಪತಿಯಾದ ರಾಯದುರ್ಗದ ಮಲ್ಲ ಭೂಪಾಲನ ದರ್ಶನ ಪಡೆದು ಹೇರಳವಾಗಿ ಧನಕನಕ ವಸ್ತುಗಳ ಕಾಣಿಕೆಯನ್ನರ್ಪಿಸಿದನು. ಸುಪ್ರೀತನಾದ ಮಲ್ಲ ಭೂಪಾಲನು ಮುಮ್ಮಡಿ ಸಿಂಗನಿಗೆ ದಳವಾಯಿ ಪದವಿಯನ್ನು ಕೊಟ್ಟು, ಹಿಂದಿನ ಅವನ ಸಣ್ಣ ರಾಜ್ಯಕ್ಕೆ ಇನ್ನೂ ೨೦ ಹಳ್ಳಿಗಳನ್ನು ಸೇರಿಸಿಕೊಂಡು ಸುಖವಾಗಿ ರಾಜ್ಯಭಾರ ಮಾಡಿಕೊಂಡಿರುವಂತೆ ಅಪ್ಪಣೆ ಮಾಡಿ ಕಳುಹಿಸಿದನು. ಮುಮ್ಮಡಿ ಸಿಂಗನು ಹನಯ ದುರ್ಗವನ್ನು ಅಂದರೆ ಮೊಳಕಾಲ್ಮೂರು ತಾಲ್ಲೂಕಿನಲ್ಲಿರುವ ಇಂದಿನ ಬ್ರಹ್ಮ

ಗಿರಿಯನ್ನು ತನ್ನ ರಾಜಧಾನಿಯಾಗಿ ಮಾಡಿಕೊಂಡು ಸುಖದಿಂದ ರಾಜ್ಯಭಾರ ಮಾಡುತ್ತಿದ್ದನು.

ಮುಮ್ಮಡಿ ಸಿಂಗನ ಅಭ್ಯುದಯವನ್ನು ಕಂಡು ನೆರೆಹೊರೆಯ ಸಾಮಂತರು ಹೊಟ್ಟೆಕಿಚ್ಚಿನಿಂದ ಸಹಿಸದಾದರು. ಪೂರ್ವ ದಿಕ್ಕಿನಲ್ಲಿದ್ದ ಗುತ್ತಿಯ ಜಗದಾಪಿ ಗಾಂಗೇಯನೂ ದಕ್ಷಿಣದಲ್ಲಿ ಚಿಮ್ಮುತ್ತೂರು (ಇಂದಿನ ಚಿತ್ರದುರ್ಗ) ನಗರದಲ್ಲಿದ್ದ ಹೊಯಿಸಳರ ರಾಜ ಪ್ರತಿನಿಧಿಯೂ, ಕೋಟೆಯ ಕಲ್ಲು ಸಾಮಂತನೂ, ಪಶ್ಚಿಮ ಮತ್ತು ವಾಯವ್ಯದಲ್ಲಿ ಬೇತೂರು ಸಾಮಂತಾಧಿಪತಿಯೂ, ಕೊಂಕಣೇಶ್ವರನೂ ಮುಮ್ಮಡಿ ಸಿಂಗನಿಗೆ ಬಲವಾದ ಶತ್ರುಗಳಾದರು.

ಕಾಳಗಗಳು: ಬೇತೂರಿನ ಚಾವುಂಡರಸನು ಕ್ರಿ. ಶ. ೧೨೮೦ನೆಯ ಪ್ರಮಾದಿ ಸಂವತ್ಸರದಲ್ಲಿ ಮುಮ್ಮಡಿ ಸಿಂಗನ ಅಭೇಧ್ಯವಾದ ದೊರವಾಡಿ ಕೋಟೆಗೆ ಮುತ್ತಿಗೆ ಹಾಕಿ, ತಾನೇ ಮಡಿದನು. ಮುಮ್ಮಡಿಗೆ ಜಯವಾಯಿತು. ವಿಷು ಸಂವತ್ಸರದಲ್ಲಿ ಮೂಡನಾಡಿನ ಸಿಂಗಯ್ಯ ನಾಯಕನು ಆಳು ಕುದುರೆ ಸಹಿತ ಬಂದು ದಾವಣಗೆರೆಯ ಬಳಿ ಬನ್ನಿಕೋಡು ಗ್ರಾಮದ ಕುರುಮಂದೆಯನ್ನು ಕೊಂಡು ಹೋಗುವಾಗ ಬೊಮ್ಮಯ ನಾಯಕನು ತುರುಗಳನ್ನು ಮರಳಿಸಿ ತಾನೂ ಸ್ವರ್ಗವನ್ನೇರಿದನು. ಅನಂತರ ಚಾವುಂಡರಸನ ಸೋದರನಾದ ವಣದೇವರಸನು ಕೊಂಕಣಾಧೀಶ್ವರ ಕನ್ನರಸನ ಸಹಾಯದಿಂದ ಪುನಃ ದೊರವಾಡಿಗೆ ಮುತ್ತಿಗೆ ಹಾಕಿದನು. ಮುಮ್ಮಡಿ ಸಿಂಗನು ಸಾಮಾನ್ಯನೇ! ವಣ ದೇವರಸನು ಚಿತ್ರಭಾನು ಸಂವತ್ಸರದ ಚೈತ್ರ ಶುದ್ಧ ೧೫ ಆದಿತ್ಯವಾರದಲ್ಲು (೨೫-೩-೧೨೮೨) ಜಿನ ಲೋಕಕ್ಕೆ ಪ್ರಯಾಣ ಮಾಡಿದನು. ವಿಜಯ ಲಕ್ಷ್ಮಿಯು ಮುಮ್ಮಡಿ ಸಿಂಗನ ಕಂಠಕ್ಕೆ ಹೂ ಮಾಲೆ ಹಾಕಿದಳು. ಮಹಾ ಮಂಡಳೇಶ್ವರ ಕನ್ನರ ದೇವನೂ ಅವನ ಅನುಯಾಯಿಗಳೂ ಇನ್ನೂ ಕೆಲವು ಕಾಲ ಕಾದಿದರೂ ಕೋಟೆಯನ್ನು ಸಾಧಿಸಲಾರದೆ ಹಿಂತಿರುಗಿ ಪಲಾಯನ ಮಾಡಬೇಕಾಯಿತು. ಮುಮ್ಮಡಿಯು ಶತ್ರುಗಳನ್ನು ಬೆನ್ನಟ್ಟಿ ಬಂದು ಚಿತ್ರಭಾನು ಸಂವತ್ಸರದ ಭಾದ್ರಪದ ಬಹುಳ ೧೦ ಆದಿತ್ಯವಾರದಲ್ಲೂ ಚಾವುಂಡರಸನ ಭಾವಮೈದನ ಗೋಪರಸನನ್ನು ನಾನಾವಿ ಕೆಳಸಾಪುರದೆಡೆಯಲ್ಲಿ ೨೭-೮-೧೨೮೨ರಲ್ಲಿ ಕಾದಿ ಕೊಂದನು. ವೀರ ರಾಮದೇವ ರಾಯನ ವಿಜಯ ರಾಜ್ಯೋದಯದ ೧೭ನೆಯ ವರ್ಷದಲ್ಲಿ ಸರ್ವಜಿತು ಸಂವತ್ಸರದ ಕಾರ್ತೀಕ ಶು. ೧೦ರಲ್ಲಿ (೧೨೮೭ ಎದಿ) ಮುಮ್ಮಡಿ ಸಿಂಗನೊಡನೆ

ಕಾದುವಾಗ ಮಹದೇವರಾಯನ ಮಗ ದ್ಯಾಮೋ ನಾಯಕನು ಮಡಿದನು.

ಹೊಯ್ಸಳರ ಮಹಾ ಸಾಮಂತ ಸಂಗಯ್ಯ ನಾಯಕನು ಮುಮ್ಮಡಿ ಸಿಂಗನ ರಾಜ್ಯದ ಕಣಿಯ ಕಲ್ಲುನಾಡೊಳಗಿನ ಸಿರಿಗೊಳಲು ಮುಂತಾದ ಕೋಟೆಗಳನ್ನು ಮುತ್ತುವುದಕ್ಕೆ ಹೋಗಿ ಅಪಜಯ ಹೊಂದಿದನು. ಈ ಕಾಳಗದಲ್ಲಿ ಸಂಗಯ್ಯ ನಾಯಕನ ಪಕ್ಷದ ಸೋಮಯ್ಯನ ಮಗ ಭೀಮಯ್ಯ ನಾಯಕನು ಮಡಿದನು. ಮುಯ್ಯಿ ತೀರಿಸಲು ಮುಮ್ಮಡಿ ಸಿಂಗನು ಹೊಯ್ಸಳರ ಕೋಟೆಯ ಕಲ್ಲು ಮತ್ತು ಬೆಮ್ಮತ್ತನೂರುಗಳ ಮೇಲೆ ಶಕ ೧೨೦೪ನೆಯ ವಿಷು ಸಂವತ್ಸರವಲ್ಲಿ ದಾಳಿನಡೆಸಿ ಜಯ ಪಡೆದನು. ಈ ರೀತಿ ಹೊಯ್ಸಳರೂ ಮುಮ್ಮಡಿಗೆ ಸೋತು, ತಲೆಬಾಗಬೇಕಾಯಿತು. ಸೇವುಣರೂ ಹೊಯ್ಸಳರೂ, ಗುತ್ತಿಯ ತೆಲುಗಾಣ್ಯದ ಅರಸರೂ ಪರಾಕ್ರಮಿಯಾದ ಮುಮ್ಮಡಿಯೊಡನೆ ಸ್ನೇಹ ಬೆಳಸಬೇಕಾಯಿತು.

ರಾಯದುರ್ಗದ ಅಧಿಪತಿಯಾದ ಮಲ್ಲದೇವನು ತನ್ನ ಸೋದರ ಮಾವನಾದ ರಾಮದೇವರಾಯನ ಆಧಿಪತ್ಯವನ್ನು ಅಂಗೀಕರಿಸದೆ ಸ್ವತಂತ್ರನೆಂದು ಹೇಳಿಕೊಳ್ಳಲುಪಕ್ರಮಿಸಿದನು. ಆಗ ಗುತ್ತಿಯ ಅರಸು ಜಗದಾಪೆ ನಾಂಗೇಯನೂ ಮುಮ್ಮಡಿ ಸಿಂಗನೂ ಸೇರಿ ಮಲ್ಲದೇವನನ್ನು ಎದುರಿಸಿ, ಯುದ್ಧದಲ್ಲಿ ಅವನನ್ನು ಸಂಹರಿಸಿದನು.

ರಾಜ್ಯ ವಿಸ್ತಾರ: ಮುಮ್ಮಡಿ ಸಿಂಗನಿಗೆ ಚಿತ್ರದುರ್ಗದ ಜಿಲ್ಲೆಯ ಉತ್ತರಾರ್ಧವಾದ ಹರಿಹರ, ದಾವಣಗೆರೆ, ಜಗಳೂರು, ಮೊಳಕಾಲ್ಮೂರು ತಾಲ್ಲೂಕುಗಳೂ ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ, ಸೊಂಡೂರು, ಹೊಸಪೇಟೆ ಬಳ್ಳಾರಿ ತಾಲ್ಲೂಕುಗಳೂ ಸೇರಿದ್ದವೆಂದೂ, ಇವನ ಅಧಿಕಾರವೂ ಉತ್ತರದಲ್ಲಿ ಕರ್ನೂಲಿನವರೆಗೂ, ಪೂರ್ವದಲ್ಲಿ ನೆಲ್ಲೂರು ಜಿಲ್ಲೆಯ ಉದಯಗಿರಿಯವರೆಗೂ ವ್ಯಾಪಿಸಿತ್ತೆಂದು ಹೇಳಬಹುದು.

ಬಳಗ: ಮುಮ್ಮಡಿಸಿಂಗನಿಗೆ ಮಾದವನಾಯ ಕರೆ ಅಥವಾ ಮಂಚಲೆ ಸಹೋದರ'ನೆಂಬ ಸಾಂಗತ್ಯದ ಸಾರಾಂಶವು ೧೯೪೦ನೆಯ ಅಕ್ಟೋಬರು ಎಂಬ ರಾಣಿಯಲ್ಲಿ ಕಂಪಿಲ ದೇವರಾಯನು ಜನಿಸಿದನು. ಇವನಿಗೆ ಖಂಡೆಯರಾಯ ಎಂಬ ಬಿರುದು ಇತ್ತು. ಪೆರುಮಯ್ಯ ನಾಯಕನು ಮುಮ್ಮಡಿ ಸಿಂಗನ ಸೋದರನೋ, ಸಮೀಪ ಬಂಧುವೋ ಆಗಬೇಕು. ಇವನ ಮಂತ್ರಿ ಬೈಚಪ್ಪ.

ವೀರ ಕಂಪಿಲದೇವ: ಮುಮ್ಮಡಿ ಸಿಂಗನು ಎರಡು ಪಟ್ಟು ಕಾಲ ಅಂದರೆ ಸುಮಾರು ೨೪ ವರ್ಷ ಕಾಲ ರಾಜ್ಯಭಾರ ಮಾಡಿ ವೃದ್ಧಾಪ್ಯದಿಂದ ತೀರಿ ಹೋದಾಗ ಅವನ ಮಗ ವೀರಕಂಪಿಲದೇವನಿಗೆ ಎಳೆಯ ಪ್ರಾಯ. ತಾಯಿ ಮಾದನಾಗತಿಯೇ ರಾಜ್ಯಧರಳಾಗಿದ್ದಳು. ಜಾಣನಾದ ಬೈಚಪ್ಪ ಮಂತ್ರಿಯು ವಿವೇಕದಿಂದ ರಾಜ್ಯಸೂತ್ರಗಳು ಸಡಿಲವಾಗದಂತೆ ನೋಡಿಕೊಳ್ಳುತ್ತಿದ್ದನು. ಹುಣ್ಣಿನ ಮೇಲೆ ಬರೆಕೊಟ್ಟಂತೆ ಬರ ಪ್ರಾಪ್ತವಾಯಿತು. ಹನೆಯ ರಾಜಧಾನಿಯನ್ನು ತ್ಯಜಿಸಿ, ಜಟ್ಟಂಗಿ ಗಿರಿಯ ಬಳಿಯ ಕಾನನಕ್ಕೂ ಅನಂತರ ಕುಮಾರ ಸ್ವಾಮಿಯು ನೆಲೆಸಿರುವ ಲೋಹಾಚಲ ಅರಣ್ಯಕ್ಕೂ ವಲಸೆ ಹೋದರು. ಇದಕ್ಕೆ ಹೊಸಮಲೆ ಅರಣ್ಯವೆಂದೂ ಹೆಸರು. ಅಲ್ಲಿಯೇ ಒಂದು ನಗರ ನಿರ್ಮಾಣವಾಯಿತು. ಅದಕ್ಕೆ ಹೊಸಮಲೆದುರ್ಗ ಎಂದು ಹೆಸರಾಯಿತು. ಸೊಂಡೂರು ತಾಲ್ಲೂಕಿನಲ್ಲಿ ಹೊಸಮಲೆಯ ಪಟ್ಟಣದ ಕೋಟೆಯ ಕುರುಹುಗಳು ಈಗಲೂ ಇವೆ. ಕಂಪಿಲದೇವರಾಯನಿಗೆ ಅನೇಕ ಹೆಂಡತಿಯರಿದ್ದರು. ಆದರೆ ಗುಜರಾತು ದೇಶದಿಂದ ರಾಜ್ಯಭ್ರಷ್ಟನಾಗಿ ಬಂದಿದ್ದ ಚಾರಾಮರಾಯನೆಂಬ ಅರಸನ ಕುವರಿ ಹರಿಯಲಾದೇವಿಯು ಪಟ್ಟದ ರಾಣಿಯಾದಳು. ಕಾಟಮ್ಮ, ರತ್ನಾಜಿ, ಹಂಪಾಜಿ, ಸಿಂಗಾಜಿ ಮತ್ತು ಸಿರೋಮಣಿ ಎಂಬ ಮಾನವತಿಯರು ಇಷ್ಟದ ರಾಣಿಯರು.

ಹರಿಯಾಲದೇವಿಗೆ ಮಾದಮ್ಮ, ಕುಮಾರ ರಾಮ ಮತ್ತು ಸಿಂಗಮ್ಮ ಎಂಬ ಮಕ್ಕಳಾದರು. ಕಾಟಣ್ಣನೆಂಬ ಸಾಕುಮಗನೂ, ಕುಮಾರರಾಮನೂ ರಾಮಲಕ್ಷ್ಮಣರಂತೆಯೂ, ಲವಕುಶರಂತೆಯೂ ಅನ್ಯೋನ್ಯಪ್ರೀತಿಯಿಂದ ಒಬ್ಬರನ್ನೊಬ್ಬರು ಅಗಲದೆ ಇದ್ದರು. ಇವರು ಸಮಯೋಚಿತ ವಿದ್ಯೆಯನ್ನೂ ಅಂಗಸಾಧನೆಯನ್ನೂ ಕಲಿತು ಗಜ ತುರಗ ಹೋರಾಟವಲ್ಲಿ ನಿಪುಣರಾದರು ಕುಮಾರ ರಾಮನಿಗೆ ಕತ್ತಿಯ ವರಸೆಯಲ್ಲಿ ಸರಿಗಟ್ಟುವವರು ಆಗ ಭರತ ಖಂಡದಲ್ಲಿಯೇ ಯಾರೂ ಇರಲಿಲ್ಲ.

ರತ್ನಾಜಿ: ಬೇಟೆಯಾಡಿ ಹಿಂದಿರುಗುತ್ತಿದ್ದಾಗ ಕಂಪಿಲರಾಯನು ನಾಲ್ಕುಂದಿ ಮುಕ್ಕುಂದಿಯ ದೇವರೆಡ್ಡಿಯ ಮಗಳಾದ ಬೆಡಗುಗಾತಿ ರತ್ನಾಜಿ ಎಂಬ ತರುಣಿಯನ್ನು ಕಂಡು ಮೋಹಿಸಿ, ದೇವರೆಡ್ಡಿಗೆ ಎರಡು ಗ್ರಾಮಗಳನ್ನು ಉಡುಗೊರೆಯಾಗಿ ಕೊಟ್ಟು ರತ್ನಾಜಿಯನ್ನು ವಿವಾಹವಾಗಿ ಕರೆದುಕೊಂಡು ಬಂದು ಹೊಸಮಲೆಯಲ್ಲಿ ಬೇರೆ ಅರಮನೆಯಲ್ಲಿಟ್ಟು ಅವಳಲ್ಲಿ ಹೆಚ್ಚು ಅನುರಕ್ತ

ನಾಗಿರುತ್ತಿದ್ದನು. ರತ್ನಾಜಿಯ ಮನಸ್ಸು ಉನ್ನತವಾದುದಾಗಿರಲಿಲ್ಲ, ಅವಳಿಂದ ತನ್ನ ಮಗ ಕುಮಾರರಾಮನಿಗೆ ಕೇಡಾದೀತೆಂದು ಹರಿಯಲಾದೇವಿ ಚಿಂತಿಸಿದಳು, ಕುಮಾರರಾಮನು ತಾಯಿಯ ಇಂಗಿತವನ್ನರಿತು, ತಾನು ಯಾವಾಗಲೂ ಪರದಾರ ಸೋದರನಾಗಿರುವುದಾಗಿ ತಾಯಿಗೆ ಭಾಷೆಕೊಟ್ಟು ಪರದಾರ ಸೋದರತೆಯು ಯಾವಾಗಲೂ ತನ್ನಲ್ಲಿ ಆವಿರ್ಭವಿಸಿರಬೇಕೆಂದು, ಒಂದು ರತ್ನಖಚಿತವಾದ ತೋಡವನ್ನು ಅಂದರೆ ಕಾಲು ಬಳೆಯನ್ನು ಮಾಡಿಸಿ, ಅದರ ಮೇಲೆ 'ಪರದಾರ ಸೋದರ ರಾಮ' ಎಂಬ ಅಕ್ಷರಗಳನ್ನು ಕೆತ್ತಿಸಿ ಕಾಲಲ್ಲಿ ಧರಿಸಿದನು.

ಮಂತ್ರಿ ಮಂಡಲ. ತಂದೆಯ ಕಾಲದ ಹಿರಿಯನಾದ ಬೈಚಪ್ಪನು ಮುಖ್ಯಮಂತ್ರಿಯಾಗಿಯೂ, ಮಾವ ಮಲ್ಲಿಕರಾಜ, ಭಾವಭೈರವ ಎಂಬುವರು ಇತರ ಮಂತ್ರಿಗಳು ಮಾರಮ್ಮನ ಗಂಡನಾದ ಅಳಿಯ ಸಂಗಮರಾಜನು ಒಬ್ಬ ಮುಖ್ಯ ಸೇನಾನಿ.

ಸಂಗ್ರಾಮಗಳು: ಕ್ಷಾಮಡಾಮರಗಳಿಂದಲೂ ಇನ್ನೂ, ಬಾಲಕನಾಗಿದ್ದುದರಿಂದಲೂ ಕಂಪಿಲರಾಯನೂ ದೇವಗಿರಿಯ ರಾಮದೇವರಾಯನ ಆಶ್ರಿತನಾಗಬೇಕಾಯಿತು. ಪ್ರವರ್ಧಮಾನನಾಗಿ ಸೇವುಣರ ರಣನಾಯಕ (ಸೇನಾನಿ)ನಾದನು. ಹೊಯ್ಸಳನ ಮೇಲೆ ದಂಡೆತ್ತಿ ಬಂದು ಶಕ ೧೨೨೫ನೆಯ ಶೋಭಕೃತ ಸಂವತ್ಸರದಲ್ಲಿ (೧೩೦೩ ಕ್ರಿ.ಶ.) ಹೊಯ್ಸಳರ ಕೋಟೆಯಾದ ಹೊಳಲ್ಕೆರೆಗೆ ಮುತ್ತಿಗೆ ಹಾಕಿದನು. ಆಗ ಮುಮ್ಮಡಿ ವೀರಬಲ್ಲಾಳನ ಭಾವ ಮೈದುನನೂ, ಚಿಮ್ಮತ್ತೂರಿನ ಮಹಾ ಮಂಡಳೀಶ್ವರನೂ ಆದ ಸೋಮಯ್ಯ ದಣಾಯಕನೂ, ಅವನ ಹಡಪದ ಸೋಮಣ್ಣನೂ ಮಡಿದರು. ಇದೇ ಕಾಳಗದಲ್ಲಿ ಹೊಯ್ಸಳರ ವೀರನಾದ ಬಸಪ್ಪ, ಸನಿಗಾವುಂಡ, ಸಿದ್ದನಾಯಕ ಮೊದಲಾದವರು ಮಡಿದರು. ಕ್ರಿ.ಶ. ೧೩೦೫ ರಿಂದ ೧೩೧೮ರೊಳಗೆ ವೀರ ಕಂಪಿಲದೇವನು ಎರಡು ಮೂರು ಬಾರಿ ಹೊಯ್ಸಳ ರಾಜ್ಯದ ಮೇಲೆ ಧಾಳಿ ಮಾಡಿದನು. ತುಂಗಭದ್ರಾ ನದಿಯ ದಕ್ಷಿಣ ಭಾಗವು ಈ ಕಾಳಗಗಳ ರಣಭೂಮಿಯಾಗಿತ್ತು. ಈ ಕಾಳಗಗಳಿಂದ ಕರ್ನಾಟಕದ ಈರ್ವರು ಚಕ್ರವರ್ತಿಗಳ ಬಲವೂ ಕುಗ್ಗಿಹೋಯಿತು.

ದೇವಗಿರಿಯವರೊಡನೆ ಕಾಳಗ: ಕ್ರಿ. ಶ. ೧೩೧೦ಕ್ಕೆ ಸ್ವಲ್ಪ ಕಾಲ ಮುಂಚೆ ರಾಮದೇವರಾಯನು ಮಡಿದನು. ಅವನ ಮಗ ಶಂಕರನು ಮುಸಲ್ಮಾನರಿಗೆ

ಬಗ್ಗಲಿಲ್ಲ. ಮಲ್ಲಿಕಾಫೂರನು ಹೊಯ್ಸಳರನ್ನು ಕ್ರಿ. ಶ. ೧೩೧೦ ರಲ್ಲಿ ಸೋಲಿಸಿದನು. ೧೩೧೨ರಲ್ಲಿ ಶಂಕರನನ್ನು ಮಲ್ಲಿಕ್‌ಕಾಫರನು ಯುದ್ಧದಲ್ಲಿ ಕೊಂದು ಆ ರಾಜ್ಯವನ್ನು ದೆಹಲಿಗೆ ಸೇರಿಸಿಕೊಂಡನು.

ಕಂಪಿಲ ದೇವರಾಯನು ಮಾತ್ರ ದೆಹಲಿಯ ಸುಲ್ತಾನರ ಆಧಿಪತ್ಯವನ್ನು ಒಪ್ಪಿಕೊಳ್ಳಲಿಲ್ಲ. ಆದ್ದರಿಂದ ಮಲ್ಲಿಕ್ ಕಾಫರನು ಹೊಸಮಲೆ ದುರ್ಗಕ್ಕೆ ಮಿಂಚಿನ ವೇಗದಲ್ಲಿ ಬಂದು ಮುತ್ತಿದನು. ಕಂಪಿಲದೇವರಾಯನ ಸೇನೆಯ ಏಟು ಬಲವಾಗಲು ಮಲ್ಲಿಕ್ ಕಾಫರನು ಮುತ್ತಿಗೆಯನ್ನೆಬ್ಬಿಸಿ ಹಿಂತಿರುಗಬೇಕಾಯಿತು. ದೇವಗಿರಿಗೆ ಹಿಂದಿರುಗುವ ವೇಳೆಗೆ ದೆಹಲಿಯಿಂದ ಕರೆ ಬಂತು. ಆದ್ದರಿಂದ ಹಿಂದಿರುಗಬೇಕಾಯಿತು. ಕಂಪಿಲನು ದೆಹಲಿಗೆ ಮಣಿಯಲೇ ಇಲ್ಲ. ಅನಂತರ ದೇವಗಿರಿಗೆ ಪ್ರಾಂತಾಧಿಕಾರಿಯಾಗಿ ಬಂದ ಅಮೀರ್-ಉಲ್-ಮುಲ್ಕನು ಕಂಪಿಲದೇವನ ರಾಜ್ಯದ ಮೇಲೆ ಏರಿಬರುವ ಯೋಚನೆ ಮಾಡಲೇ ಇಲ್ಲ.

ಓರುಗಲ್ಲವರೊಡನೆ ಕಾಳಗ: ತೆಲುಗು ಚಕ್ರೇಶ್ವರರ ರಾಜಧಾನಿಯಾದ ಓರಗಲ್ಲು ಅಬೇಧ್ಯವಾದ ಕೋಟೆ. ಅದು ಎಪ್ಪತ್ತೇಳು ಕೊತ್ತಲಗಳಿಂದ ಆವೃತವಾಗಿತ್ತು ಒಂದೊಂದು ಕೊತ್ತಲವನ್ನು ಒಬ್ಬೊಬ್ಬ ನಾಯಕನು ರಕ್ಷಿಸುತ್ತಿದ್ದನು. ಚಕ್ರೇಶನಾದ ಪ್ರತಾಪರುದ್ರನ ಬಳಿ ೯ ಲಕ್ಷ ಬಿಲ್ಲಾಳುಗಳೂ, ೨೦ ಸಾವಿರ ರಾವುತರೂ, ೧೦೦ ಮದಗಜಾರೋಹಿಗಳೂ ಇದ್ದರು. ವೀರ ಕಂಪಿಲನು ಓರುಗಲ್ಲು ಕೋಟೆಯನ್ನು ಆರು ತಿಂಗಳ ಕಾಲ ಮುತ್ತಿ ಸಾಧಿಸಲಾಗದೆ ಹಿಂತಿರುಗಿದನು. ಪ್ರತಿಯಾಗಿ ಓರುಗಲ್ಲಿನ ಸೇನಾಧಿಪತಿಗಳು ಕಂಪಿಲದೇವನ ರಾಜ್ಯದ ಮೇಲೆ ಧಾಳಿಮಾಡಿ ರಾಜಧಾನಿಯ ನಂದನವನ (ಉದ್ಯಾನ)ವನ್ನು ಹಾಳುಮಾಡಿ ಹಿಂತಿರುಗಿದರು.

ಗುತ್ತಿಯವರೊಡನೆ ಕಾಳಗ: ಮುಮ್ಮಡಿ ಸಿಂಗನು ಗುತ್ತಿಯ ಅರಸರಿಂದ ಕಪ್ಪವನ್ನು ಪಡೆಯುತ್ತಿದ್ದನು. ಆದರೆ ಜಗತಾಪಿ ಗಂಗನು ಮಹದೇವ ಭೋಳ ಮಹಾರಾಜ (ಅವನಿಗೆ ಕಸ್ತೂರಿ ಚಾಮಯ್ಯ ಎಂಬ ಇನ್ನೊಂದು ಹೆಸರೂ ಇದ್ದಂತೆ ಕಾಣುತ್ತೆ)ನು ಕಂಪಿಲನಿಗೆ ಹೆದರದೆ ಸ್ವತಂತ್ರನಾಗಿ ಕಂಪಿಲನಿಂದಲೇ ಕಪ್ಪವನ್ನು ಹೊಂದುತ್ತಿದ್ದನು.

ಪಾಳೆಯಗಾರರು: ಸುತ್ತಮುತ್ತಲಿನ ಪಾಳೆಯಗಾರರು ದೆಹಲಿಯ ಸುಲ್ತಾನನಿಂದ ಪ್ರೋತ್ಸಾಹಿತರಾಗಿ ಕಪ್ಪವನ್ನು ಕೊಡದೇ ನಿಲ್ಲಿಸಿದರು. ಇಷ್ಟೇ.

ಅಲ್ಲ. ಕಂಪಿಲದೇವನೇ ತನ್ನ ಸಿಂಹಾಸನವನ್ನು ತ್ಯಜಿಸಬೇಕೆಂದು ದೆಹಲಿ ಯಿಂದ ಮೇಲಿಂದ ಮೇಲೆ ಕಾಗದಗಳು ಬರುತ್ತಲೇ ಇದ್ದವು. ಆದರೆ ದಿಟ್ಟ ನಾದ ಮಂತ್ರಿ ಬೈಚಪ್ಪನು ದೆಹಲಿಯವರಿಗೆ ತಕ್ಕ ಮನ್ನಣೆಯನ್ನು ಮಾಡುತ್ತಾ ಕುಮಾರ ರಾಮನು ಅಭ್ಯುದಯ ಹೊಂದುವವರೆಗೂ ಉಳಿಸಿಕೊಂಡಿದ್ದನು.

ಒಟ್ಟಿನಲ್ಲಿ ವೀರ ಕಂಪಿಲದೇವನು ತನ್ನ ತಂದೆ ಮುಮ್ಮಡಿ ಸಿಂಗನಷ್ಟು ಪ್ರಬಲನಾಗಿರಲಿಲ್ಲ. ಕುಮಾರ ರಾಮನು ಪ್ರಾಪ್ತವಯಸ್ಕನಾಗುವ ವೇಳೆಗೆ ಇವನ ರಾಜ್ಯಾಡಳಿತವು ಕುಸಿದಿತ್ತು. ಜಾಣನಾದ ಮಂತ್ರಿಯಿಂದ ರಾಜ್ಯವು ಉಳಿದಿತ್ತು ಅಷ್ಟೆ.

ದಾನಗಳು: ರಾಮದೇವರಾಯನ ಸಾಮಂತ ಕೃಷ್ಣಕಂಧಾರನು ಬ್ರಾಹ್ಮಣರಿಗೆ ಹರಿಹರವನ್ನು ದಾನಮಾಡಿದ್ದನು. ಮುಮ್ಮಡಿ ಸಿಂಗನು ಕೃಷ್ಣ ಕಂಧಾರನನ್ನು ಸೋಲಿಸಿದಾಗ ಹರಿಹರವು ಖಿಲವಾಯಿತು. ಕಂಪಿಲದೇವನು ರಾಮದೇವರಾಯನ ವಿಜಯದ ೩೨ನೇ ವರ್ಷದಲ್ಲಿ ಅಂದರೆ ಕ್ರಿ.ಶ. ೧೩೦೦ನೇ ಶಾರ್ವರಿಯಲ್ಲಿ ಅದೇ ಬ್ರಾಹ್ಮಣರಿಗೆ ಪುನರ್ದತ್ತಿಯಾಗಿ ಕೊಟ್ಟನು.

ಹಂಪೆಯಲ್ಲಿರುವ ಕಂಪಿಲದೇವರಾಯನ ಶಾಸನದಿಂದ "ಶ್ರೀ ಸಂಗಮೇಶ್ವರ ದೇವರ ಪಾದಪದ್ಮಾರಾಧಕರು ಮಪ್ಪ ಮುಮ್ಮಡಿ ಸಿಂಗಯ್ಯ ನಾಯಕನ ಕುಮಾರ ವೀರ ಕಂಪಿಲದೇವನು ತಮ್ಮ ತಾಯಿ ಮಾದನಾಯಕಿತಿ, ಸಿಂಗಯ್ಯ ನಾಯಕ, ಪೆರುಮಯ್ಯ ನಾಯಕ ಇಂತು ಮೂವರ ಲಿಂಗಪ್ರತಿಷ್ಠೆ ಮಾಡಿಸಿದ ಶಿವಾಲಯ" ಎಂದು ಗೊತ್ತಾಗುವುದು.

ಕುಮಾರ ರಾಮ: ಪ್ರಾಪ್ತ ವಯಸ್ಕನಾದ ಮೇಲೆ ತನ್ನ ತಂದೆಯಿಂದ ಅಪ್ಪಣೆಪಡೆದು. ಪಾಳುಬಿದ್ದಿದ್ದ ಕುಮ್ಮಟದ ಕೋಟೆಯನ್ನು ಪುನರ್ನಿರ್ಮಾಣ ಮಾಡಿ ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡನು. ಕೇವಲ ಇಪ್ಪತ್ತು ವಯಸ್ಸಿನವನಾಗಿದ್ದಾಗಲೇ, "ದೆಹಲಿಯ ಸುಲ್ತಾನನ ಪಾಪಾಸನ್ನು ಪೂಜಿಸಬೇಕು ; ಇಲ್ಲವೆ ಪಾದಗಾಣಿಕೆ ಒಪ್ಪಿಸಬೇಕು" ಎಂದು ಬಂದ ದೆಹಲಿಯ ಸರದಾರನನ್ನು ಸೋಲಿಸಿ, ಬಾದಷಹನ ಪಾದುಕೆಗಳನ್ನು ಮೆಟ್ಟಿದನು, ಅಲೆಕ್ಸಾಂಡರನಂತೆ ವಿಜಯಯಾತ್ರೆ ಹೊರಟು ಮುಮ್ಮಡಿ ವೀರ ಬಲ್ಲಾಳ, ಹುಳಿಯಾರು ಮಾದನಗೌಡ ಮೊದಲಾದವರನ್ನು ಜಯಿಸಿದನು. ಮರೆಹೊಕ್ಕ ಬಾದೂರನನ್ನು ರಕ್ಷಿಸಿದನು. ಓರುಗಲ್ಲು ಆಂಧ್ರ ಚಕ್ರೇಶ್ವರನಿಂದ ಹೆಸರಾದ ಕುದುರೆಯನ್ನು ತಂದನು. ಚಿಕ್ಕಮ್ಮನ ದುರುಳತನದಲ್ಲಿ ಸಿಕ್ಕಿಬಿದ್ದು ತೊಂದರೆ

ಗೀಡಾದನು. ದೆಹಲಿಯ ಸುಲ್ತಾನನ ಅಪಾರವಾದ ಸೇನೆಯನ್ನು ಮೂರು ಸಲ ಸೋಲಿಸಿ, ದಕ್ಷಿಣ ಭಾರತವನ್ನು ಪರಕೀಯರ ಆಕ್ರಮಣದಿಂದ ರಕ್ಷಿಸಿದನು. ಹಿಂದೂ ಧರ್ಮವನ್ನೂ ಸಂಸ್ಕೃತಿಯನ್ನೂ ಕಾಪಾಡಿ, ವಿಜಯನಗರ ಧರ್ಮ ಸಾಮ್ರಾಜ್ಯ ಸ್ಥಾಪನೆಗೆ ತಳಹದಿ ಹಾಕಿದನು.

ಹೀಗಿದ್ದರೂ ಕುಮಾರ ರಾಮನು ಕಾಲ್ಪನಿಕ ವ್ಯಕ್ತಿ ಎಂದು ಹೇಳುವವರು ಇದ್ದಾರೆ. ದೆಹಲಿ ಸುಲ್ತಾನರ ಚರಿತ್ರೆಕಾರರು ಕುಮಾರ ರಾಮನ ಹೆಸರಿಗೆ ಬದಲಾಗಿ ಅವನ ರಾಜ್ಯವನ್ನು ಕಂಪಿಲನ ರಾಜ್ಯ ಎಂದು ಸಂಬೋಧಿಸಿರುವುದೇ ಈ ಸಂದೇಹಕ್ಕೆ ಮುಖ್ಯ ಕಾರಣವಾಗಿದೆ. ಕನ್ನಡ, ಆಂಧ್ರ, ತಮಿಳು ಮತ್ತು ಸಂಸ್ಕೃತ ಸಾಹಿತ್ಯದಲ್ಲಿ ಕುಮಾರ ರಾಮನ ಸಾಹಸಗಳು ವರ್ಣಿತವಾಗಿವೆ. ಅಲ್ಲದೆ ಎರಡು ಶಿಲಾ ಶಾಸನಗಳಲ್ಲಿ ಕುಮಾರ ರಾಮನ ಹೆಸರೂ ಉಕ್ತವಾಗಿದೆ.

"ಸ್ವಸ್ತಿ ಸಮಸ್ತ ಭುವನಾಶ್ರಯಂ ಶ್ರೀ ಪೃಥ್ವೀ ವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಸತ್ಯಾಶ್ರಯ ಕುಳತಿಳಕಂ ಶ್ರೀ ವೀರಪ್ರತಾಪ ಹರಿಹರ ಮಹಾರಾಯರ ಕುಮಾರ ದೇವರಾಯರು ಸುಖದಿಂ ರಾಜ್ಯಂಗೆಯ್ಯುತ್ತಿರಲ್, ಗೋವೆಯ ರಾಜ್ಯಕ್ಕೆ ಸಲ್ಲುವ ಚಂದ್ರಗುತ್ತಿಯ ನಾಡೊಳಗಣ ಚಂಗಾಪುರದಲ್ಲು ಕಂಪಿಲರಾಯನ ಬಾಹತ್ತರ ನಿಯೋಗಾಧಿಪತಿ ಪತಿ ಕಾರ್ಯದುರಂಧರನುಮಪ್ಪ, ಬೈಚಯ್ಯ ಹೆಗ್ಗಡೆ ಮೊಮ್ಮಗಂ, ಸೇನಾಧಿಪತಿ ಸಂಗಮನ ಕುಮಾರ ಮಾವರಸು **ಕುಮಾರ ರಾಮನಾಥ** ದೇವರ ಪ್ರತಿಷ್ಠೆಯನ್ನು ಶಕ ವರ್ಷ ೧೩೨೯ನೆಯ ಸರ್ವಜಿತು ಸಂವತ್ಸರದ ಆಶ್ವಯುಜ ಶುದ್ಧ ೧೦ ಆದಿತ್ಯವಾರದಲ್ಲು ಮಾಡಿಸಿದರು ಮಂಗಳ ಮಹಾ ಶ್ರೀ ಶ್ರೀ ಶ್ರೀ"

ಎಂದು ಹಾವೇರಿಯ ಬಳಿಯ ಸಂಗೂರು ಶಿಲಾ ಶಾಸನವು ಸಾರುತ್ತಿರುವುದು. ಈ ಶಾಸನ ಕಲ್ಲಿನಲ್ಲಿ ಕುಮಾರ ರಾಮನ ವಿಗ್ರವು ಸುಂದರವಾಗಿ ಶಿಲ್ಪ ಕಲಾ ಕೌಶಲ್ಯದಿಂದ ಕೊಡಿದೆ. ತುಮಕೂರು ಜಿಲ್ಲಾ ಕೊರಟಗೆರೆ ತಾಲ್ಲೂಕು ದೊಡ್ಡ ಪಾಲನಹಳ್ಳಿಯಲ್ಲಿ ಕುಮಾರರಾಮನ ಗುಡಿ ಇರುತ್ತದೆ. ಅಲ್ಲಿ ವರ್ಷ ವರ್ಷವೂ ಜಾತ್ರೆ ನಡೆಯುವುದು. ಆಗ್ಗೆ ಕುಮಾರರಾಮನ ಕತೆ ಹೇಳುವರು. ತೀರ್ಥಹಳ್ಳಿ ತಾಲ್ಲೂಕು ಕೊಳವಳ್ಳಿಯ ಮಾಸ್ತಿ ಗುಡಿಯ ವೀರ ಕಲ್ಲಿನಲ್ಲಿ,

"ಶಕ ವರುಷ ೧೩೫೪ನೆಯ ಪರಿಧಾವಿ ಸಂವತ್ಸರದ ಮಾರ್ಗಶಿರ ಬಹುಳ ಬಿದಿಗೆ ಬುಧವಾರದಲ್ಲು (೧೪೩೩ ಕ್ರಿಶ) ಕೊಳವಳ್ಳಿಗೆ ಪಠಾವಳಿ ಬಂದು

ಕಾದಿದಲ್ಲಿ ಬೊಂಮರಸ ಹೆಗ್ಗಡೆಯರ ಮಗ ಪುಟ್ಟ ಹೆಗ್ಗಡೆಯು ದಳವನ್ನು ಮುರಿದು ಆವರಣದೊಳಗೆ **ಕುಮಾರ ರಾಮನಾಥನ** ಪ್ರತಾಪವಾಗಿ ಅಂಬು ಗೂಡಾಗಿ ಸ್ವರ್ಗವನ್ನು ಸೂರೆಗೊಂಡನು ಎಂದಿದೆ."

ಈ ರೀತಿ ಕುಮಾರರಾಮನು ವಾಸ್ತವಿಕ ಪುರುಷ ಎಂಬ ಸಂಗತಿಗೆ ಸಮಕಾಲೀನ ಶಿಲಾಶಾಸನಗಳೂ ವಿಗ್ರಹಗಳೂ ಸಾಕ್ಷಿಗಳಾಗಿವೆ. ಗುಡಿಕೋಟೆ, ಹರಪನಹಳ್ಳಿ, ಮತ್ತು ತರೀಕೆರೆ ಪಾಳೆಯಗಾರರು ಕುಮಾರರಾಮನ ಪುಟ್ಟಲ ವಂಶೀಯರು. ಗುಡಿ ಕೋಟೆಯಲ್ಲಿದ್ದ ಶ್ರೀಯುತ ಜಟ್ಟಂಗಿ ರಾಜ ಎಂಬುವರು ಕುಮಾರರಾಮನಾಥನ ನೇರವಾದ ವಂಶಜರೆಂದು ತಿಳಿದು ಬಂದಿರುವುದು.

ದಿಲ್ಲಿಯ ಸುಲ್ತಾನರೂ ದಕ್ಷಿಣ ಭಾರತವೂ: ಕನ್ನಡ ಸಾಹಿತ್ಯದಲ್ಲಿ ದಿಲ್ಲಿಯ ಅರಸರನ್ನು ಸುಲ್ತಾನರೆಂದೂ, ದಿಲ್ಲಿಯ ಸೇನಾನಿಗಳನ್ನು ನೇಮಿಖಾನ ಎಂದೂ ಸಂಬೋಧಿಸಿದರು. ಆದ್ದರಿಂದ ನಿಜಾಂಶವನ್ನರಿಯಲು ದಿಲ್ಲಿಯ ಸುಲ್ತಾನರ ಇತಿಹಾಸಕ್ಕೆ ಗಮನ ಕೊಡಬೇಕಾಗುತ್ತದೆ.

ದಕ್ಷಿಣ ಭರತಖಂಡದ ಅಪಾರವಾದ ಐಶ್ವರ್ಯದ ಮೇಲೆ ಮೊದಲು ದೃಷ್ಟಿ ಬೀರಿದವನು ಅಲ್ಲಾಉದ್ದೀನ್ ಖಿಲ್ಜಿ. ಅಪಮಾನ ಮಾಡಿದ ಅತ್ತೆಯ ಗರ್ವವನ್ನು ಮುರಿಯಲು ಐಶ್ವರ್ಯ ಸಂಪಾದನೆಗಾಗಿ ದಕ್ಷಿಣ ಭರತ ಖಂಡಕ್ಕೆ ಅಲ್ಪಸೇನೆಯೊಡನೆ ಓಡಿ ಬಂದನು. ಅದೃಷ್ಟವಂತ, ಮಹಾ ಪ್ರತಾಪ ಶಾಲಿಯೂ ಅಪಾರವಾದ ಸೇನಾನಿತನೂ ಆದ ದೇವಗಿರಿಯ ರಾಮದೇವರಾಯನು ಮೋಸದ ಬಲೆಯಲ್ಲಿ ಬಂಧಿತನಾಗಿ ಹೇರಳವಾಗಿ ಕಪ್ಪ ಕೊಡಬೇಕಾಯಿತು. ಇದು ನಡೆದದ್ದು ಕ್ರಿಶ ೧೨೯೪ರಲ್ಲಿ ಅಲ್ಲಾಉದ್ದೀನನು ಅಪಾರವಾದ ಐಶ್ವರ್ಯದಿಂದ ಹಿಂದಿರುಗಿ ಮಾವನಾದ ಜಲಾಲುದ್ದೀನ ಸುಲ್ತಾನನನ್ನು ಕೊಂದು ತಾನೇ ೧೨೯೬ರಲ್ಲಿ ದೆಹಲಿಯ ಗಾದಿಯನ್ನೇರಿದನು. ೧೩೧೧ರ ವೇಳೆ ಅಲ್ಲಾಉದ್ದೀನನ ಸೇನಾಪತಿಗಳಾದ ಮಲ್ಲಿಕ್ ಕಾಫೂರ್ ಮತ್ತು ಖ್ವಾಜಾಹಾಜಿಯು ದಕ್ಷಿಣ ಭರತಖಂಡವನ್ನೆಲ್ಲಾ ಜಯಿಸಿ ಅಲ್ಲಿಯ ಪ್ರತಾಪ ರುದ್ರರಾಯ, ಮುಮ್ಮಡಿ ವೀರಬಲ್ಲಾಳ ಮತ್ತು ಮಧುರೆಯ ಪಾಂಡ್ಯರನ್ನು ಆಶ್ರಿತರನ್ನಾಗಿ ಮಾಡಿಕೊಂಡರು. ಆದರೂ ಕಂಪಿಲದೇವರಾಯ ಮತ್ತು ಸ್ವತಂತ್ರನಾಗಿಯೇ ಇದ್ದರು. ೧೩೧೬ರಲ್ಲಿ ಮಲ್ಲಿಕ್ ಕಾಫರನು ತನ್ನ ಯಜಮಾನನ್ನೇ ಕೊಂದು ತಾನೇ ಸುಲ್ತಾನನಾದನು. ಅಲ್ಪ ಕಾಲದಲ್ಲಿಯೇ ಅವನೂ ಕೊಲ್ಲಲ್ಪಟ್ಟು ಅಲ್ಲಾಉದೀನನ ಮೂರನೆಯ ಮಗ

ಮುಬಾರಕನು ಗಾದಿಯನ್ನೇರಿದನು. ಅವನು ೧೩೨೦ರಲ್ಲಿ ಕೊಲ್ಲಲ್ಪಟ್ಟನು ಈ ವೇಳೆಗೆ ದೇವಗಿರಿಯಲ್ಲಿ ಸುಲ್ತಾನನ ಪ್ರಾಂತಾಧಿಕಾರಿಯು ನೇಮಕವಾಗಿದ್ದನು. ಆಂಧ್ರದ ಐದು ಜಿಲ್ಲೆಗಳು ಮುಸಲ್ಮಾನರ ವಶವಾಗಿದ್ದವು.

ಸೇನಾನಿ ಖುಸ್ರುವು ನಸ್ರುದ್ದೀರ್ ಎಂಬ ಹೆಸರಿನಿಂದ ದಿಳ್ಳಿಯ ಸಮ್ರಾಟನಾದನು. ಇವನು ಗುಜರಾತು ದೇಶದವನು. ಪರಯ ಜಾತಿಯವನು, ಕುಲಗೆಟ್ಟು ಮುಸಲ್ಮಾನನಾಗಿದ್ದನು. ಇವನ ಕಾಲದಲ್ಲಿ ಆಸ್ಥಾನದಲ್ಲಿ ಪರಯರ ಪ್ರಾಬಲ್ಯ ಬೆಳೆಯಿತು, ಹಿಂದೂಗಳೂ, ಮುಸಲ್ಮಾನರೂ ಇವನ ಆಡಳಿತವನ್ನು ಸಹಿಸದಾದರು ನಾಲ್ಕು ತಿಂಗಳೊಳಗೇ ಪಂಜಾಬಿನ ಪ್ರಾಂತಾಧಿಕಾರಿಯಾಗಿದ್ದ ಗಯಾಸುದ್ದೀರ್ ತೊಗ್ಲಕ್ಕನು ಖುಸ್ರುವನ್ನು ಸೋಲಿಸಿ ತಾನೇ ಸಿಂಹಾಸನವನ್ನೇರಿದನು.

ತೊಗ್ಲಕ್ ಸಾಮ್ರಾಜ್ಯ ವಿಸ್ತರಣೆ: ಗಯಾಸುದ್ದೀನನು ೧೩೨೧ ರಿಂದ ೧೩೨೫ನೆಯ ಫೆಬ್ರವರಿವರೆಗೆ ಆಳಿದನು. ಆಗ್ಗೆ ಅವನ ಮಗ ಉಲೂಫ್‌ಖಾರ್ ಅಥವ ಮುಹಮ್ಮದ್‌ಬಿರ್ ತೊಗ್ಲಕ್ಕನು ದಕ್ಷಿಣದಲ್ಲಿ ಆಂಧ್ರ ಐದು ಜಿಲ್ಲೆಗಳ ಪ್ರಾಂತಾಧಿಕಾರಿಯಾಗಿದ್ದನು. ಮೊದಲು ಓರಗಲ್ಲನ್ನು ಮುತ್ತಿ ಸೋತನು. ಪುನಃ ದೆಹಲಿಯಿಂದ ಸಹಾಯ ತಂದು ಪ್ರತಾಪರುದ್ರನನ್ನು ಸೆರೆಹಿಡಿದು ದೆಹಲಿಗೆ ಕಳುಹಿಸಿದನು. ಸೆರೆಯಲ್ಲಿ ಪ್ರತಾಪ ರುದ್ರರಾಯನು ಮೃತನಾದನೆಂದು ಕೆಲವು ಚರಿತ್ರಕಾರರು ಬರೆದಿದ್ದಾರೆ. ಆದರೆ ಅವನು ಹಿಂದಿರುಗಿ ಬಂದು ೧೩೩೦ರ ವರೆಗೆ ಓರಗಲ್ಲಿನಲ್ಲಿ ಆಳಿದನೆಂದು ಸಾಂಗತ್ಯಗಳಿಂದ ತಿಳಿದು ಬರುತ್ತದೆ. ಅನಂತರ ಮುಹಮ್ಮದ್ ತೊಗ್ಲಕ್ಕನು ಓರಿಸ್ಸಾ ದೇಶವನ್ನೂ ಆಕ್ರಮಿಸಿ ದೆಹಲಿಗೆ ಹಿಂತಿರುಗಿದನು. ತನ್ನ ತಂದೆಯು ಡೇರೆ ಉರುಳಿ ಮಡಿಯಲು ಮುಹಮ್ಮದನೇ ಸುಲ್ತಾನನಾಗಿ ಕ್ರಿಶ ೧೩೫೦ರ ವರೆಗೂ ರಾಜ್ಯವಾಳಿದನು.

ದಂಗೆ: 'ಸುಲ್ತಾರ್ ಅಬು ಇಮು ಜಾಹಿಡ್ ಮುಹಮುದ್ ಷಾ' ಎಂಬ ಅಭಿದಾನದಿಂದ ದೆಹಲಿಯ ಸಿಂಹಾಸನವನ್ನೇರಿದ ಕೂಡಲೇ ಇವನ ಸೋದರಮಾವನೂ ಸಗರದ ಪ್ರಾಂತಾಧಿಕಾರಿಯೂ ಆಗಿದ್ದ ಬಾಹುಯುದ್ದೀನ್ ಗುರ್ಷಹಾಸ್ಪನು ಸುಲ್ತಾನನ ಮೇಲೆ ದಂಗೆ ಎದ್ದನು. ಕಾರಣ ನಾನಾ ವಿಧವಾಗಿ ಹೇಳಲ್ಪಟ್ಟಿವೆ. ಮುಹಮ್ಮದನ ಕ್ರೂರ ಆಡಳಿತವೇ ಮುಖ್ಯ ಕಾರಣ ಎಂಬುದು ಇಸ್ಮೀಯನ ಮತ. ಪದ್ಧತಿಯ ಪ್ರಕಾರ ಗುಸನಹಾಸ್ಪನು

ಪ್ರಮಾಣ ಸ್ವೀಕರಿಸಲಿಲ್ಲ ಎಂಬುದು ಇಬ್ನ್ ಬಟೂಟನ ಅಭಿಪ್ರಾಯ. ಬಾದೂರನು ದೆಹಲಿಗೆ ವಿರೋಧಿಯಾದ ಕಂಪಿಲದೇವರಾಯ ಮತ್ತು ಅವನ ಮಗ ಕುಮಾರ ರಾಮನಿಗೆ ಉಡುಗರೆ ಉಲುಪೆ ಕೊಟ್ಟನೆಂದು ಚಾಡಿಯೇ ಮುಖ್ಯ ಕಾರಣ ಎಂಬುದು ಮಹಲಿಂಗಸ್ವಾಮಿಯ ವಿವರಣೆ. ಯಾರಿಂದಲೂ ಬಗ್ಗಿಸಲಸಾಧ್ಯವಾದ ವಿಚಿತ್ರ ಬಿಲ್ಲನ್ನು ಮುರಿಯಲು ಅವಮಾನಿತರಾದ ಖಾನಖಾನರಖಾಡಿ ಮಾತಿಗಾಗಿ ಸುಲ್ತಾನನು ಬಾದೂರನ ಮೇಲೆ ಬಿದ್ದನೆಂದು ನಂಜುಂಡ ಕವಿಯ ವಾದ. ಮಾಡಬಾರದ ತಪ್ಪು ಮಾಡಿ ಸುಲ್ತಾನನ ಕೋಪಕ್ಕೆ ಹೆದರಿ, ತನ್ನ ಪ್ರಾಂತಕ್ಕೆ ಹೋಗಿ ದಂಗೆ ಎದ್ದನು ಎಂಬುದು ನಾಗಸಂಗಯ್ಯನ ವಿವರಣೆ.

ಬಾಬಮ್ಮ: ಮಹಮ್ಮದನ ಹಿರಿಯ ಕುಮಾರಿಯಾದ ಬಾಬಮ್ಮನು ಕುಮಾರ ರಾಮನ ರೂಪ, ಗುಣಗಳಿಗೆ ಮೆಚ್ಚಿ ಅವನನ್ನೇ ವಿವಾಹವಾಗುವುದಾಗಿ ಹಠ ಹಿಡಿದಳೆಂದು ಸಾಂಗತ್ಯಗಳು ಹೇಳುತ್ತವೆ ಮುಸಲ್ಮಾನ ಚರಿತ್ರಕಾರರು ಇದನ್ನು ಹೇಳಿಲ್ಲ. ಮಹಮ್ಮದನಿಗೆ ಹೆಣ್ಣು ಮಕ್ಕಳೇ ಇರಲಿಲ್ಲವೆಂದು ಹೇಳುವವರಿದ್ದಾರೆ. ಅವನಿಗೆ ೩ ಜನ ಹೆಣ್ಣು ಮಕ್ಕಳಿದ್ದರೆಂದೂ ಹಿರಿಯ ಕುಮಾರಿಯು ಮಹಮ್ಮದನೊಡನೆ ಕುದುರೆ ಸವಾರಿ, ಬೇಟೆ, ದರ್ಬಾರುಗಳಿಗೆ ಹೋಗುತ್ತಾ ಇದ್ದಳೆಂದು ಇತಿಹಾಸದಿಂದ ವ್ಯಕ್ತವಾಗುವುದು. ಈ ಕುಮಾರಿಯು ವಿವಾಹವಾಗಲೇ ಇಲ್ಲವಂತೆ—ಕನ್ನಡ ಕವಿಗಳನ್ನು ನಂಬದಿರಲು ಕಾರಣವಿಲ್ಲ.

ನೇಮಿರ್ಖಾ: ದಿಳ್ಳಿಯ ಸೇನಾಪತಿಗಳನ್ನೆಲ್ಲಾ ನೇಮಿರ್ಖಾ ಎಂದೇ ಕನ್ನಡ ಕವಿಗಳು ಹೇಳಿದ್ದಾರೆ; ವಾಸ್ತವಾಂಶವೇ ಬೇರೆ. ಹೆಸರು ತಿಳಿಯದೇನೇ ದುಷ್ಟನಾದ ಕಾಲನೇಮಿಯ ಹೆಸರಿನಲ್ಲಿ ನೇಮಿ ಎಂದಿರುವರು. ಕುಮ್ಮಟನಗರದ ಮೊದಲನೇ ದಾಳಿಯನ್ನು ಖ್ವಾಜಾಜಿಹಾನನೂ ಮತ್ತು ಕುತುಬ್ ಉಲ್‌ಮುಲ್ಕನೂ, ಮೂರನೇ ದಾಳಿಯನ್ನು ಮಲ್ಲಿಕ್ ಝಾದನೂ ಸೇನಾನಿಗಳಾಗಿ ನಡೆಸಿದರು.

ಜೋಹರು: ಕುಮಾರ ರಾಮನು ಮಡಿದರೂ ದೆಹಲಿಯವರ ಕಾರ್ಯ ಪೂರ್ತಿಯಾಗಲಿಲ್ಲ. ಕಂಪಿಲದೇವರಾಯನು ಹೊಸಮಲೆ ದುರ್ಗವನ್ನು ರಕ್ಷಿಸುತ್ತಿದ್ದನು. ಬಾದೂರನೂ ಸೆರೆ ಸಿಕ್ಕಿರಲಿಲ್ಲ ಆದ್ದರಿಂದ ಮಲ್ಲಿಕ್ ಝಾದನು ಕುಮ್ಮಟದುರ್ಗ ವಶವಾದನಂತರ ಹೊಸಮಲೆಯ ದುರ್ಗಕ್ಕೆ ಹೋಗಿ, ಮುತ್ತಿ

ದನು. ಬಾದೂರನ ಸಹಾಯಕ್ಕೆ ಕೊಂಚ ಸೇನೆಯನ್ನು ಕೊಟ್ಟು ಬೇರೆ ಕಡೆಗೆ ಕಳುಹಿಸಿದನು. ಮಂತ್ರಿ ಬೈಚಪ್ಪನು ರತ್ನಸಿಂಹಾಸನವನ್ನೂ ಭಂಡಾರದ ಬೆಲೆ ಬಾಳುವ ವಸ್ತುಗಳನ್ನೂ ತೆಗೆದುಕೊಂಡು ಪೆನುಗೊಂಡೆಗೆ ಹೋಗಿ ಬಚ್ಚಿಟ್ಟನು.

ಕಂಪಿಲದೇವರಾಯನು ೫೦೦೦ ವೀರರೊಡನೆ ಹೊಸಮಲೆಯ ದುರ್ಗವನ್ನು ಒಂದು ತಿಂಗಳು ಕಾಲ ರಕ್ಷಿಸಿದನು. ಆಹಾರ ಸಾಮುಗ್ರಿಗಳು ಮುಗಿದವು. ಆದರೂ ಧೈರ್ಯಗುಂದಲಿಲ್ಲ ಶರಣಾಗತನಾಗಲಿಲ್ಲ. ಈ ಕನ್ನಡನಾಡ ಕೆಚ್ಚಿದೆಯ ವೃದ್ಧವೀರರು ಪ್ರಾಣಾಂತ್ಯದವರೆಗೂ ಕಡಿದಾಡಿ ಮಡಿಯುವುದೇ ಲೇಸೆಂದು ನಿರ್ಧರಿಸಿದನು. ಆದರೆ ಅದಕ್ಕೆ ಮುಂಚೆ ಇನ್ನೊಂದು ಕಾರ್ಯವನ್ನು ಮಾಡಬೇಕಾಗಿತ್ತು. ಹೆಂಗಸರು ಮಕ್ಕಳು ಮುಸಲ್ಮಾನರ ವಶವಾಗದಂತೆ ಅವರ ಮಾನ ರಕ್ಷಣೆಯು ತನ್ನ ಮುಖ್ಯ ಕರ್ತವ್ಯವಾಗಿತ್ತು. ಅರಮನೆಯ ಮುಂದೆ ಅಗ್ನಿಕುಂಡವನ್ನು ಮಾಡಿಸಿ ಹೊತ್ತಿಸಿದನು. ರಾಣಿಯರನ್ನೂ ಹೆಣ್ಣು ಮಕ್ಕಳನ್ನೂ ಕರೆದು "ಇಗೋ ನಾನು ಮರಣಕ್ಕೆ ಸಿದ್ಧನಾಗಿರುವೆನು. ನಿಮ್ಮಲ್ಲಿ ಸಿದ್ಧರಾಗಿರುವರು ಈ ಅಗ್ನಿಕುಂಡದಲ್ಲಿ ಆಹುತಿಯಾಗಿರಿ" ಎಂದು ಹೇಳಿದನು. "ನಾವು ನಮ್ಮ ಪತಿಗಳಿಗಿಂತ ಮುಂಚೆ ಸ್ವರ್ಗವನ್ನು ಸೇರಿ, ಅಲ್ಲಿಗೆ ಬರುವ ತಮ್ಮ ಪತಿಗಳನ್ನು ಸುಸ್ವಾಗತಿಸಲು ಸಿದ್ಧರಿರುವೆವು" ಎಂದು ಹೆಂಗಳೆಯರು ನುಡಿದು, ಅರಿಸಿನ ಗಂಧವನ್ನು ಧರಿಸಿ, ಕಂಪಿಲದೇವರಾಯನಿಗೆ ಅಡ್ಡ ಬಿದ್ದು, ನಮಸ್ಕಾರ ಮಾಡಿ ಅಗ್ನಿಕುಂಡದಲ್ಲಿ ಹಾರಿ ಆಹುತಿಯಾದರು. ರಾಯನ ಪಕ್ಷದ ಮಾನ್ಯೆಯರ ಮತ್ತು ಮಂತ್ರಿಗಳ ಹೆಂಡಂದಿರೂ, ಮತ್ತು ಇತರ ಮಾನಿನಿಯರೂ ಅವನನ್ನೇ ಅನುಸರಿಸಿದರು. ಕೋಟೆಯು ಶತೃವಶವಾಗುವುದನ್ನು ನೋಡಲು ಒಬ್ಬ ಹೆಂಗಸೂ ಅಲ್ಲಿ ಜೀವಿಸಿರಲಿಲ್ಲ.

ಅನಂತರ ಕಂಪಿಲದೇವರಾಯನು ಗಂಧವನ್ನು ಹಚ್ಚಿಕೊಂಡು, ಎದೆಯ ಉಕ್ಕಿನ ಕವಚದ ವಿನಹ ಉಳಿದ ಉಡುಪನ್ನೂ, ಆಯುಧಗಳನ್ನೂ ಧರಿಸಿದನು. ಇತರರೂ ಸಿದ್ಧರಾದರು ಶತೃಗಳೊಡನೆ ಪ್ರಾಣಾಂತ್ಯದವರೆಗೆ ಹೋರಾಡಿ ಮಡಿದರು. ಪಟ್ಟಣವು ಶತೃಗಳ ವಶವಾಯಿತು.

ಅನಂತರ ಉಳಿದ ಪಟ್ಟಣವಾಸಿಗಳು ಸೆರೆಯಾದರು ರಾಯನ ೧೧ ಜನ ಮಕ್ಕಳು ಸೆರೆಹಿಡಿಯಲ್ಪಟ್ಟು ಸುಲ್ತಾನನ ಬಳಿಗೆ ಕರೆದೊಯ್ಯಲ್ಪಟ್ಟಾಗ, ಅವರ

ನ್ನೆಲ್ಲಾ ಸುಲ್ತಾನನು ಮುಸಲ್ಮಾನರನ್ನಾಗಿ ಮಾಡಿದನು. ಆದರೆ ಅವರ ಧೈರ್ಯಕ್ಕೆ ಮೆಚ್ಚಿ ಮರ್ಯಾದೆಯಿಂದ ಕಂಡನು. ಅವರಲ್ಲೊಬ್ಬನು ಇಬ್ನ್ ಬಟೂಟನಿಗೆ ಪರಮ ಸ್ನೇಹಿತನಾಗಿದ್ದನು.

ಮಲ್ಲಿಕ್ ಝಾದನು ಬಲ್ಲಾಳರಾಯನ ಬಳಿ ಇದ್ದ ಬಾದೂರನನ್ನು ಹಿಡಿದು ತಂದು. ಸುಲ್ತಾನನಿಗೆ ಒಪ್ಪಿಸಿದರು. ಅವನ ಚರ್ಮವನ್ನು ಸುಲಿಸಿ, ಮಾಂಸವನ್ನು ಬೇಯಿಸಿ ಅವನ ಮಕ್ಕಳಿಗೆ ಉಣಲಿಟ್ಟರು. ಚರ್ಮದಲ್ಲಿ ಒಣ ಹುಲ್ಲು ತುಂಬಿಸಿ. ಬಹದ್ದೂರ್ ಬುರ್ರಾ ಎಂಬುವನ ಇದೇ ತರಹ ದೇಹ ದೊಂದಿಗೆ ಇಟ್ಟು ದೇಶದಲ್ಲೆಲ್ಲಾ ಮೆರವಣಿಗೆ ಮಾಡಿದರು. ದೇಶದ್ರೋಹಿಗ ಳಿಗೆ ಉಂಟಾಗುವ ಗತಿಯನ್ನು ತೋರಿಸುವುದೇ ಇವನ ಉದ್ದೇಶವಾಗಿತ್ತು.

ಸುಲ್ತಾನನು ಕುಮ್ಮಟದುರ್ಗವನ್ನು ವಶಪಡಿಸಿಕೊಂಡು ಎರಡು ವರ್ಷ ತನ್ನ ಸ್ವಾಧೀನದಲ್ಲಿಟ್ಟುಕೊಂಡಿದ್ದನು. ಉತ್ತರ ಹಿಂದೂ ಸ್ಥಾನದಲ್ಲಿ ದಂಗೆ ಗಳು ನಡೆಯುತ್ತಿರುವುದೆಂದು ವರ್ತಮಾನ ಕೇಳಿ, ಮಲ್ಲಿಕ್ ನಬಿ ಎಂಬ ಸರದಾರರನ್ನೂ ಕುಮ್ಮಟನಗರದ ಪ್ರಾಂತ್ಯಾಧಿಕಾರಿಯಾಗಿ ನೇಮಿಸಿ, ತಾನ ದೆಹಲಿಗೆ ಹಿಂತಿರುಗಿದನು.

ಕನ್ನಡಿಗರು ಮಲ್ಲಿಕ್ ನಬಿಯ ಮೇಲೆ ತಿರುಗಿ ಬಿದ್ದು ದಕ್ಷಿಣದ ರಾಜ್ಯವೇ ದೆಹಲಿಯ ಕೈಬಿಟ್ಟು ಹೋಗುವಂತಾಯಿತು. ಆಗ ಕಂಪಿಲದೇವ ರಾಯನಿಗೆ ಸಮೀಪ ಬಂಧುವಾದ ಹರಿಹರನನ್ನು ಕುಮ್ಮಟಕ್ಕೆ ಪ್ರಾಂತಾಧಿ ಕಾರಿಯನ್ನಾಗಿ ನೇಮಿಸಿದನು. ಹರಿಹರ ಮತ್ತು ಅವನ ಸೋದರ ಬುಕ್ಕ ಇವರೇ ವಿಜಯನಗರ ಸಾಮ್ರಾಜ್ಯವನ್ನು ಸ್ಥಾಪಿಸಿದರು.

ಬೈಚಪ್ಪ: ಮುಮ್ಮಡಿ ಸಿಂಗನ ಕಾಲದಿಂದಲೂ ಮಂತ್ರಿಯಾಗಿದ್ದ ಬೈಚಪ್ಪನು ರತ್ನಸಿಂಹಾಸನವನ್ನು ಭಂಡಾರದ ಬೆಲೆಬಾಳುವ ವಸ್ತುಗಳನ್ನೂ ಬಚ್ಚಿಟ್ಟು ಮುಸಲ್ಮಾನರಿಗೆ ದೊರಕದಂತೆ ಮಾಡಿದನು ಹರಿಹರ ವಿದ್ಯಾ ರಣ್ಯರಿಗೆ ಸಹಾಯಮಾಡಿ ಕುಮ್ಮಟ ನಗರದ ಸಮೀಪದಲ್ಲಿ ವಿಜಯನಗರ ಸಾಮ್ರಾಜ್ಯ ಸ್ಥಾಪನೆಗೆ ಮೂಲಕಾರಣನಾದನು. ಇವನು ಬುಕ್ಕರಾಯನಿಗೂ ನೆಚ್ಚಿನ ಮಂತ್ರಿಯಾಗಿದ್ದನು. ಇಂತಹ ಚಾಣಾಕ್ಷ ಮಂತ್ರಿಯನ್ನು ತಾನು ನೋಡಲೇ ಇಲ್ಲ ಎಂದು ಮಹಮ್ಮದ್ ತೊಗ್ಲಕ್ಕನೇ ಅಭಿಪ್ರಾಯಪಟ್ಟಿದ್ದಾನೆ. ಬೈಚಪ್ಪನ ವಂಶಜರು ವಿಜಯನಗರದರಸರ ಕಾಲದಲ್ಲಿ ಬಹಳ ಕಾಲ ಮಂತ್ರಿ ಗಳಾಗಿದ್ದರು.

**ಕುಮಾರ ರಾಮುನ ವಂಶಜರೂ, ಆಶ್ರಿತವಂಶಜರೂ :** ಕುಮಾರ ರಾಮುನಿಗೆ ಜಟ್ಟಂಗಿ ರಾಜನೆಂಬ ಪುತ್ರನಿದ್ದರು. ಇವನು ಅನೇಕ ಕಾಲ ಸ್ವತಂತ್ರನಾಗಿ ಆಳಿದವನು. ಇವನ ಆಸ್ಥಾನದಲ್ಲಿದ್ದ ಪ್ರಭುದೇವರೆಂಬುವರು ಭಾರತ, ಜೈಮಿನಿಗಳಿಗೆ ಸಮಾನವಾದ ಕುಮಾರ ರಾಮುನ ಕಾವ್ಯ ಕಥೆಗಳನ್ನು ರಚಿಸಿದಂತೆ ಕಾಣುತ್ತೆ, ತರೀಕೆರೆ, ಹರಪನಹಳ್ಳಿ ಮತ್ತು ಗುಡಿಕೋಟೆ ಪಾಳೆಯಗಾರರು ಈ ಪುವ್ವಲವಂಶದವರೆಂದು ಮೇಲೆಯೇ ಹೇಳಿದೆ. ಇವರ ವಂಶೀಕರು ಈಗಲೂ ಇರುವರು ಚಿತ್ರದುರ್ಗದ ಪಾಳೆಯಗಾರರ ಪೂರ್ವಿಕರೂ ಸಹಾ ಕುಮಾರ ರಾಮುನ ಆಸ್ಥಾನದಲ್ಲಿದ್ದಂತೆ ಕೆಲವು ಹೆಸರುಗಳಿಂದ ತಿಳಿದು ಬರುವುದು. ಗುಜ್ಜಲೋಬ ಎಂಬ ಕುಮಾರ ರಾಮುನ ಕಾಲದ ವೀರನೋರ್ವನು ಜಗಲೂರು ತಾಲ್ಲೂಕಿನಲ್ಲಿ ಹೊಸದುರ್ಗ ಎಂಬ ಕೋಟೆಯನ್ನೂ ಕಟ್ಟಿಕೊಂಡು ಕೆಲವುಕಾಲ ಆಳಿದನಂತೆ ಮೈಸೂರು ಶಾಸನ ಸಭಾಸದಸ್ಯರಾದ ಶ್ರೀ ಅಂಚೆ ಗುರಿಕಾರ್ ಭೀಮಪ್ಪನಾಯಕರು ಈ ಗುಜ್ಜಲೋಬನ ವಂಶಸ್ಥರೆಂದು ತಿಳಿದು ಬರುವುದು.

ಕಾಲ:- ತೊಗ್ಲಕ್ ಸುಲ್ತಾನರು ಕುಮ್ಮಟವನ್ನು ವಶಮಾಡಿಕೊಳ್ಳಲು ೧೨ ವರ್ಷವಾಯಿತಂತೆ- ಅಂದರೆ ೧೩೨೨ ರಿಂದ ೧೨ ವರ್ಷ ಕ್ರಿ.ಶ. ೧೩೩೪ ರವರೆಗೆ ಈ ಕಾಳಗಗಳು ನಡೆದಿರಬೇಕು. ಎರಡುವರ್ಷಗಳ ನಂತರ ಹರಿಹರನಿಗೆ ರತ್ನಸಿಂಹಾಸನದ ಮೇಲೆ ಪಟ್ಟಾಭಿಷೇಕವಾಯಿತು.

ಇತರ ಕಥೆಗಳು : ಕನ್ನಡ ಸಾಹಿತ್ಯದಲ್ಲಿ ಇನ್ನೂ ಈ ಮಾದರಿಯ ಕಥೆಗಳು ಇವೆ. ನರಸಿಂಹ ಕವಿಯು ಮದನ ಮೋಹಿನಿ ಎಂಬ ಕಥೆಯನ್ನು ಸಾಂಗತ್ಯದಲ್ಲಿ ರಚಿಸಿರುವನು. ಸಾರಂಗಧರ, ಲಕ್ಕಣ್ಣ ಈರಣ್ಣನ ಕಥೆ ಮತ್ತು ರಾಜೇಂದ್ರ ಕುಮಾರನ ಕಥೆ ಇವುಗಳು ಕನ್ನಡ ಸಾಹಿತ್ಯದಲ್ಲಿ ಪ್ರಸಿದ್ಧವಾಗಿವೆ.

## ರತ್ನಸಿಂಹಾಸನ

ಹಂಪೆಯ ಹರಿಹರಕವಿಯೂ ಅವನ ಶಿಷ್ಯನಾದ, ರಾಘವಾಂಕ ಕವಿಯೂ ದೇವರಾಯನ ಕಾಲದವರು. ರಾಘವಾಂಕನು ರಾಜಸಭೆಗೆ ಬಂದಾಗ, ದೇವರಾಜ ವರೇಣ್ಯನು ರತ್ನಪೀಠದಲ್ಲಿ ಕುಳಿತಿದ್ದನೆಂದು ಕವಿ ಸಿದ್ಧನಂಜೇಶನು ಹೇಳಿರುವನು ಈ ರತ್ನ ಸಿಂಹಾಸನವನ್ನು ಕಂಪಿಲದೇವರಾಯನು ೧೩ ವರ್ಷ ಮಂಡಿಸಿದ್ದು ರಾಜ್ಯವು ಪರಕೀಯರ ವಶವಾಗುವ ಸಮಯದಲ್ಲಿ ಅವರಿಗೆ ಸಿಗದಂತೆ ಪೆನುಗೊಂಡೆಯ ಬಳಿ ಬಚ್ಚಿಟ್ಟನೆಂದು

ಮೈಸೂರು ಅರಸರ ಚರಿತ್ರೆಯಲ್ಲಿ ಚಿತ್ರಿತವಾಗಿದೆ. ಅನಂತರ ಶ್ರೀ ವಿದ್ಯಾರಣ್ಯರ, ಬೈಚಪ್ಪನೂ ಈ ರತ್ನಸಿಂಹಾಸನವನ್ನು ಹೊರಗೆ ತೆಗೆದು ಹರಿಹರ ಮಹರಾಯನನ್ನು ಅದರ ಮೇಲೆ ಮಂಡಿಸಿದರು. ವಿಜಯ ನಗರದಲ್ಲಿ ನಾಲ್ಕು ಅರಸು ಮನೆತನದವರೂ ಅದನ್ನೇರಿ ಧರ್ಮದಿಂದ ರಾಜ್ಯಪರಿಪಾಲನೆ ಮಾಡಿದರು. ಅರವೀಡು ವಂಶದ ತಿರುಮಲರಾಯನು ಶ್ರೀರಂಗಪಟ್ಟಣದಲ್ಲಿ ರತ್ನಸಿಂಹಾಸನಾಧೀಶನಾಗಿ ಆಳುತ್ತಿದ್ದ. ಬೆನ್ನುಫಣಿಯಿಂದ ಅಪುತ್ರವಂತನಾಗಿ ಮಡಿಯಲು ಕ್ರಿ.ಶ. ೧೬೧೧ರಲ್ಲಿ ಮೈಸೂರಿನ ರಾಜವಡೆಯರು ಶ್ರೀರಂಗಪಟ್ಟಣಕ್ಕೆ ಬಂದು ಸಿಂಹಾಸನವನ್ನೇರಿ ಪಟ್ಟಾಭಿಸಕ್ತರಾದರು.

ಇದರ ಪೂರ್ವವೃತ್ತವೂ ಆಶ್ಚರ್ಯಕರವಾಗಿದೆ. ಖಾಂಡವವನ ದಹಿಸಿದಾಗ ಅರ್ಜುನನಿಂದ ರಕ್ಷಿಸಲ್ಪಟ್ಟ ಮಯನೆಂಬ ದೈತ್ಯರಶಿಲ್ಪಿಯು ಇಂದ್ರಪ್ರಸ್ತ ಪಟ್ಟಣದಲ್ಲಿ ಪಾಂಡವರಿಗೆ ದಿವ್ಯ ಭವನವನ್ನು ನಿರ್ಮಿಸಿಕೊಟ್ಟನು. ಆಗ ನಿರ್ಮಿತವಾದದ್ದು ಈ ರತ್ನಸಿಂಹಾಸನ. ಧರ್ಮರಾಯನು ಈರತ್ನಸಿಂಹಾಸನವನ್ನೇರಿ ರಾಜಸೂಯಯಾಗ ಮಾಡಿಕೀರ್ತಿತನಾದನು. ಪಾಂಡವ ವಂಶೀಕನಾದ ಉದಯನನು ಕೌಶಾಂಬಿನಗರದಲ್ಲಿ ರತ್ನಸಿಂಹಾಸನಾದೀಶನಾಗಿ ಆಳಿದನು ಉಜ್ಜಯಿನಿಯ ಶಕಾರಿವಿಕ್ರಮಾದಿತ್ಯನು ಇಂದ್ರನ ಸಭೆಯಲ್ಲಿ ಊರ್ವಸಿಯ ನಾಟ್ಯವು ಉತ್ತಮವಾದುದು ಎಂದು ನಿರ್ಧರಿಸಿದ್ದಕ್ಕೆ ಈ ರತ್ನಸಿಂಹಾಸನವು ಇಂದ್ರನಿಂದ ವಿಕ್ರಮಾದಿತ್ಯನಿಗೆ ಕೊಡಲ್ಪಟ್ಟಿತು. ಇಲ್ಲಿ ಇಂದ್ರ ಎಂದರೆ ದೇವತೆಗಳ ರಾಜನಾದ ಮಹೇಂದ್ರನಾಗಿರಲಿಕ್ಕಿಲ್ಲ. ಮಹಾ ಮೇಘವಾಹನ ಅಂದರೆ ಮಹೇಂದ್ರನ ವಂಶೀಕನಾದ ಕಳಿಂಗಾಧಿಪತಿ ಖರವೇಲನಿರಬಹುದೇ! ಈಖರವೇಲನು ತನ್ನ ವಿಜಯಾಭ್ಯುದಯದ ಮೂರನೆಯ ವರ್ಷದಲ್ಲಿ "ಗಂಧವವೇದ ಬುಧೋದಪನಟ ಗೀತವಾದಿತ ಸಂದಾಮ್ಯನಾಹಿ ಉಸವ ಸಮಾಜಕಾರಾಪನಾಹಿ ಚ ಕಿನಾಪಯತಿ ನಗರಿಂ ಅಂದರೆ ಗಂದರ್ವವೇದ ನಿಪುಣನಾದ ಖರವೇಲನು ತನ್ನ ರಾಜಧಾನಿಯಾದ ಕಳಿಂಗನಗರದಲ್ಲಿ ದಪ. ನಾಟ್ಯ, ಗೀತ, ವಾದ್ಯಗಳಿಂದ ಶೋಭಿತವಾದ ಮತ್ತು ಸಭೆಗಳನ್ನು ಏರ್ಪಡಿಸಿದ್ದನೆಂದು ಹೇಳಲ್ಪಟ್ಟಿದೆ.ಈ ಸಭೆಯಲ್ಲಿ ವಿಕ್ರಮಾದಿತ್ಯನು ಮಹೇಂದ್ರನ ವಂಶಸ್ಥನಾದ ಖರವೇಮಹಾರಾಜನಿಂದ ಈ ರತ್ನಸಿಂಹಾಸನ ಪಡೆದಿರಬಹುದೇ ಎಂದು ಊಹಿಸಲು ಸಾಧ್ಯವಿದೆ

-ಶತಮಾನಗಳ ನಂತರ ಭೋಜನೂ ಇದನ್ನೇರಲು ಪ್ರಯತ್ನಿಸಿ

ವಿಫಲನಾದನು. ವಿಕ್ರಮಾದಿತ್ಯನ ವಂಶೀಕರಾದ ತುಂಗಭದ್ರಾ ತೀರದ ಗುತ್ತ ಹೊಳಲಿನಲ್ಲಿ ಆಳಿದ ಗುತ್ತ ಅರಸರು ರತ್ನಸಿಂಹಾಸನವನ್ನು ಕರ್ನಾಟಕಕ್ಕೆ ತಂದರು. ಈಗುತ್ತಿ ಅರಸರ ರಾಜ್ಯವನ್ನು ಕಂಪಿಲದೇವನು ಆಕ್ರಮಿಸಿದಾಗ ಈ ಸಿಂಹಾಸನವು ಅವನಿಗೆ ದೊರೆಯಿತು.

ಈ ರೀತಿ ಧರ್ಮರಾಯನ ಸಿಂಹಾಸವವು ಹಸ್ತಿನಾವತಿಯಾದ ಇಂದಿನ ದೆಹಲಿಯಿಂದ ಕೌಶಾಂಬಿ, ಕಳಿಂಗನಗರ, ಉಜ್ಜಯಿನಿ, ಧಾರಾನಗರ, ಗುತ್ತ ಹೊಳಲು, ಹೊಸಮಲೆದುರ್ಗ, ವಿಜಯನಗರ, ಶ್ರೀರಂಗಪಟ್ಟಣಗಳಲ್ಲಿ ಸಂಚರಿಸಿ ಇಂದು ಮೈಸೂರಿನಲ್ಲಿ ನೆಲೆಸಿದೆ. ಪುನಃ ಉತ್ತರಕ್ಕೆ ಏರುವ ಸೂಚನೆಯೂ ಇದೆ. ಈಗಾಗಲೇ ಹಿಂದಿನ ರಾಜಧಾನಿಗಳಾದ ವಿಜಯನಗರ, ಹೊಸಮಲೆ ಪಟ್ಟಣಗಳು ಮೈಸೂರಿಗೆ ಸೇರಿದವು. ಕರ್ನಾಟಕ ಪ್ರಾಂತವಾದಾಗ ಗುತ್ತಹೊಳಲು ರತ್ನಸಿಂಹಾಸನದ ಆಧಿಪತ್ಯಕ್ಕೆ ಸೇರುವುದು. ಮೇಲಕ್ಕೇರಿ ನಮ್ಮ ಶ್ರೀಮಜ್ಜಯಚಾಮರಾಜೇಂದ್ರ ಒಡೆಯರವರು ರತ್ನಸಿಂಹಾಸನ ಸಹಿತ ನವಭಾರತದ ಅಧ್ಯರಾಗುವಂತೆ ಶ್ರೀಚಾಮುಂಡಾಂಬಿಕಾ, ನಂಜುಂಡೇಶ್ವರರೂ, ಶ್ರೀ ಭುವನೇಶ್ವರೀ, ವಿರೂಪಾಕ್ಷೇಶ್ವರರೂ ಕರುಣಿಸಲಿ.

ಚಿತ್ರದುರ್ಗ
ತಾ|| ೧೫—೮—೧೯೫೫

ಹುಲ್ಲೂರು ಶ್ರೀನಿವಾಸ ಜೊಯಿಸ್.

ನಮ್ಮ ಮುಂಬರುವ ಕೃತಿ

# ಏಕಾಂಗಿನಿ

(ನಿರಂಜನರ ಕಾದಂಬರಿ)

ಸುನಂದೆ ವಿಜಯ ಇಬ್ಬರೂ ವಿದ್ಯಾವತಿಯರು. ಆಧುನಿಕ ದಿನಗಳಲ್ಲಿ ಬೆಳೆದ ವೈಜ್ಞಾನಿಕ ಮನೋಭಾವದವರು. ಆದರೆ ಅವರ ವೈವಾಹಿಕ ಜೀವನದಲ್ಲಿ ಎಷ್ಟೊಂದು ಅಂತರ!

ಸುನಂದೆಯ ಗಂಡ ಮನುಷ್ಯನಾಗಿರಲಿಲ್ಲ, ರಾಕ್ಷಸನಾಗಿದ್ದ. ಅವನ ರಾಕ್ಷಸೀವರ್ತನೆಯನ್ನು ಅವಳು ಎಷ್ಟೋ ಸಾರಿ ಸಹಿಸಿದಳು. ವೈವಾಹಿಕ ಜೀವನದಲ್ಲಿ ನರಕವನ್ನು ಕಂಡಳು. ಈ ದಾಂಪತ್ಯವೆಂಬುದು ವಿಧಿ ಹಾಕಿದ ಗಂಟಲ್ಲ—ಮದುವೆಯು ಪೂರ್ವ ಜನ್ಮದ ಕರ್ಮಫಲವಲ್ಲ—ಅದನ್ನು ಅನುಭವಿಸಿಯೇ ತೀರಬೇಕಾಗಿಲ್ಲ ಎಂದು ಸುನಂದೆ ಯೋಚಿಸಿದಳು.

ಆದರೆ ವಿಜಯಳು ತನ್ನ ಪಾಲಿಗೆ ಬಂದುದೇ ಪಂಚಾಮೃತವೆಂದು ನಂಬಿದಳು.

ಸುನಂದೆಯು ಜೀವನದ ಕವಲುದಾರಿಗೆ ಬಂದು ನಿಂತಳು. ರಾಕ್ಷಸನಂತಹ ಗಂಡನೊಡನಿದ್ದು ನರಕವಾಸವನ್ನನುಭವಿಸುವುದೇ? ಇಲ್ಲವೇ ವಿವಾಹ ವಿಚ್ಛೇದನ ಮಾಡಿಕೊಂಡು ಏಕಾಂಗಿನಿಯಾಗಿದ್ದು ಸಮಾಜದ ಕುಹಕವನ್ನು ಎದುರಿಸುವುದೇ?

ನಾಡಿನಲ್ಲಿನ ಈ ಕೋಲಾಹಲಕಾರಕ ವಿಷಯವೊಂದರ ಮಂಥನವೇ ಈ ವಿಚಾರ ಶೀಲ ಕಾದಂಬರಿ.

ಸುಮಾರು ೨೨೦ ಪುಟಗಳು    **ಬೆಲೆ: ೧—೪—೦**

## ನಮ್ಮ ಪ್ರಕಟನೆಗಳು

## ಏಳನೆಯ ಜೀವ

ರಾಮಚಂದ್ರಶರ್ಮರ ಕಥಾ ಸಂಕಲನ—

೨೦೦ ಪುಟಗಳು — ೧—೦—೦

## ಕನಸಿನೊಳಗೊಂದು ಕನಸು

ಎಸ್. ಕೆ. ನಾಡಿಗ್‌ರವರ ಕಾದಂಬರಿ

೨೨೦ ಪುಟಗಳು — ೧—೦—೦

## ಭಾಗೀರಥಿ

ಕೃಷ್ಣಮೂರ್ತಿ ಪುರಾಣಿಕರ ಕಾದಂಬರಿ

೨೫೦ ಪುಟಗಳು — ೧—೪—೦

## ಹೊಸ ಮೇನೇಜರು

ಕೊ. ಸು. ಸೀತಾರಾಮರವರ ಕಾದಂಬರಿ

೩೬೦ ಪುಟಗಳು — ೧—೮—೦



**ರಸಿಕ ರಂಜಿನಿ ಪ್ರಕಾಶನ**

ಅರಸೀಕೆರೆ

**ವ್ಯಕ್ತಿ ಚಿಕ್ಕದಾದರೂ ಶಕ್ತಿಹಿರಿದು**

**ಹೆಸರು ಕುಮಾರನಾದರೂ ಅವನು ಸಾಹಸಭೀಮ**

**ಒನ್ಮೆ ಕರ್ಣಾಟಕದ ರತ್ನಸಿಂಹಾಸದ ಒಡೆಯನಾಗಿದ್ದ ವೀರ.**

ಪೂವಾಲಿ ಕುಲದ ಕುಮಾರರಾಮನು ಬಾಳಿದ್ದು ಕೆಲವೇ ವರ್ಷಗಳು. ಆದರೆ ಅವನು ದಕ್ಷಿಣ ದೇಶವ ರಾಜರುಗಳನ್ನೆಲ್ಲ ಸೋಲಿಸಿ ಅದ್ವಿತೀಯ ವೀರನಾಗಿದ್ದ. ದೆಹಲಿಯ ನವಾಬ ಮಹಮುದ್ ಬಿನ್ ತೊಗಲಖನಿಗೂ ಇವನನ್ನು ಜಯಿಸಲಾಗಲಿಲ್ಲ. ರಾಮನೆಂದರೆ "ಅರಿರಾಯಮರ್ದನ" ನಾಗಿದ್ದ.

ಸುಂದರನಾದ ರಾಮನು ಕಾಮಿನಿಯರ ಕನಸಾಗಿದ್ದ. ದೆಹಲಿಯ ನವಾಬನ ಮಗಳೇ ಅವನನ್ನು ಪ್ರೀತಿಸಿ ಅವನಿಗಾಗಿ ಕೊನೆಯತನಕ ಕಾದಿದ್ದಳು! ಅವನ ಚಿಕ್ಕಮ್ಮನೇ ಅವನನ್ನು ಮೋಹಿಸಿದ್ದಳು.

ತನ್ನ ಮಗಳಿಗಾಗಿ ಅವನನ್ನು ಗೆದ್ದು ಕರೆತರಲು ದೆಹಲಿಯ ನವಾಬನು ಎಷ್ಟೋಬಾರಿ ಪ್ರಯತ್ನಿಸಿದ. ಹಿಂದೂ ರಾಜರು ಪೂಜಿಸಬೇಕೆಂದು ಕಳುಹಿಸಲ್ಪಟ್ಟಿದ್ದ ನವಾಬನ ರತ್ನಖಚಿತವಾದ ಜೋಡುಗಳನ್ನು ರಾಮನು ತಾನೇ ಮೆಟ್ಟಿ ಅವನಿಗೆ ಅಪಮಾನಮಾಡಿದ್ದ. ಆದರೂ ಸಹ ಗಂಡುಗಲಿ ಕುಮಾರರಾಮನನ್ನು ಬಂಧಿಸುವುದಾಯಿತೆ? ತಾನು ಹೋಗಿ ಅವನನ್ನು ಗೆದ್ದು ಬರುವೆನೆಂದು ನವಾಬನ ಮುಂದೆ ಬಡಾಯಿ ಕೊಚ್ಚಿದ ಕೊಂಕಣ ದೇಶದ ಮಾದಿಗಿತ್ತಿ ಮಾತಂಗಿಯು ಅವನನ್ನು ನಿಜವಾಗಿಯೂ ಜಯಿಸಿದಳೆ?

ವೀರ, ರೌದ್ರ, ಶೃಂಗಾರ ಹಾಗೂ ಕರುಣರಸಗಳಿಂದ ತುಂಬಿದ ಈ ಕಾದಂಬರಿಯನ್ನೋದಿದ ಎಲ್ಲ ಕನ್ನಡಿಗರ ಕೆಚ್ಚು ಕೆರಳುವುದು.

